# ಕಾವ್ಯ ಸಮೀಕ್ಷೆ

ತೀ. ನಂ. ಶ್ರೀಕಂಠಯ್ಯ



ಮೈಸೂರು
ಕಾವ್ಯಾಲಯ ಪ್ರಕಾಶಕರು

## ತೀ. ನಂ. ಶ್ರೀಕಂಠಯ್ಯನವರ ಕೃತಿಗಳು

ಒಲುಮೆ
ಪಂಪ
ಕನ್ನಡ ಮಧ್ಯಮ ವ್ಯಾಕರಣ
ಸಮಾಲೋಕನ
ನಂಟರು
ಭಾರತೀಯ ಕಾವ್ಯಮೀಮಾಂಸೆ
ಹೆಣ್ಣು ಮಕ್ಕಳ ಪದಗಳು (ಸಂಪಾದಿತ)
ನಂಬಿಯಣ್ಣನ ರಗಳೆ (ಸಂಪಾದಿತ)
ಗದಾಯುದ್ಧ ಸಂಗ್ರಹ (ಸಂಪಾದಿತ)
ರಾಕ್ಷಸನ ಮುದ್ರಿಕೆ
ಬಿಡಿಮುತ್ತು (ಅಚ್ಚಿನಲ್ಲಿ)

Miss Ramamani MV

ಕನ್ನಡ ಕಾವ್ಯಮಾಲೆ_೫೭

# ಕಾವ್ಯ ಸಮೀಕ್ಷೆ

ತೀ. ನಂ. ಶ್ರೀಕಂಠಯ್ಯ





ಮೈಸೂರು

ಕಾವ್ಯಾಲಯ : ಪ್ರಕಾಶಕರು

# ಅರಿಕೆ

ಕಳೆದ ಹಲವು ವರ್ಷಗಳಲ್ಲಿ ನಾನು ಬರೆದು ಪ್ರಕಟಿಸಿದ ಕೆಲವು ಲೇಖನಗಳು ಈ ಸಂಕಲನದಲ್ಲಿ ಈಗ ಒಟ್ಟುಗೂಡಿ ಅಚ್ಚಾಗಿವೆ. ಇವುಗಳಲ್ಲಿ ನಾಲ್ಕನೆಯದು ಮೈಸೂರು ಮಹಾರಾಜರವರ ಕಾಲೇಜಿನ ಕರ್ಣಾಟಕಸಂಘದ ಪ್ರಕಟನೆಯಾದ 'ಕುಮಾರವ್ಯಾಸ ಪ್ರಶಸ್ತಿ'ಗೆ ಸೇರಿದ್ದು. ಮಿಕ್ಕೆಲ್ಲವೂ ಬೆಳಕು ಕಂಡದ್ದು 'ಪ್ರಬುದ್ಧಕರ್ಣಾಟಕ'ದಲ್ಲಿ. ಹೀಗೆ ಪ್ರಥಮಾಶ್ರಯವನ್ನು ಕೊಟ್ಟ ಸಂಪಾದಕರುಗಳ ಕೃಪೆಯನ್ನು ಸಂತೋಷದಿಂದ ಸ್ಮರಿಸುತ್ತೇನೆ. 'ಶಾಕುಂತಲವನ್ನು ಕುರಿತು' ಎಂಬ ಲೇಖನಕ್ಕೆ ಮೈಸೂರಿನ ಆಕಾಶವಾಣಿಯವರು ೧೯೪೩ನೆಯ ಇಸವಿಯಲ್ಲಿ ಏರ್ಪಡಿಸಿದ್ದ ಕಾಳಿದಾಸೋತ್ಸವದಲ್ಲಿ ನಾನು ಆಡಿದ ಮಾತುಗಳು ಆಧಾರ; ಭಾಷಣದ ಧಾಟಿಯೇ ಬರೆಹದಲ್ಲೂ ಉಳಿದಿದೆ.

ಈ ಪ್ರಬಂಧಗಳಲ್ಲಿ ಒಂದೊಂದೂ ಬೇರೆ ಬೇರೆ ಕಾಲದಲ್ಲಿ ಬಿಡಿಯಾಗಿ ರಚಿತವಾಗಿದ್ದರೂ, ಇಲ್ಲಿ ಕೂಡಿಸಿ ನೋಡುವಾಗ ವಸ್ತುವಿನ ಮಟ್ಟಿಗಾದರೂ ಇವಕ್ಕೆ ಸಂಬಂಧವುಂಟೆಂದು ತೋರದಿರದು. ವಿಷಮಪ್ರಣಯದ ಅನೇಕ ಮುಖವಾದ ಗತಿ ಇವುಗಳಲ್ಲಿ ಗೋಚರಿಸುತ್ತದೆ. ಅದು ದುರಂತವಾಗಬಹುದು, ಮಂಗಳಾಂತವಾಗಬಹುದು; ನಿಂದ್ಯವಾಗಬಹುದು, ವಂದ್ಯವಾಗಬಹುದು. ಎಲ್ಲವೂ ಒಂದೇ ಹೊನಲಿನ ವಿಭಿನ್ನ ವೇಣಿಗಳು. ಕೊನೆಯ ಪ್ರಬಂಧದಲ್ಲಿ ಪ್ರತಿಪಾದನೆಯ ಗುರಿಯೂ ಕ್ರಮವೂ ಮಿಕ್ಕ ಕಡೆಗಳಿಗಿಂತ ಬೇರೆಯಾಗಿದ್ದರೂ ಅಲ್ಲಿ ಕೂಡ ಈ ಸಹಸ್ರಶೀರ್ಷ ವಸ್ತು ಹೆಡೆಯೆತ್ತಿಕೊಂಡೇ ಇದೆ.

ಇಲ್ಲಿಯ ಮೊದಲನೆಯ ಲೇಖನದಲ್ಲಿ 'ವಿಕ್ರಮೋರ್ವಶೀಯ'ವನ್ನು ಕುರಿತ ವಿಮರ್ಶೆ ಕಠಿನವಾಯಿತೆಂದು ಕಾಳಿದಾಸನ ಭಕ್ತರಿಗೆ ತೋರುವುದು ಅಸಂಭವವಲ್ಲ. ಹದಿನಾಲ್ಕು ವರ್ಷಗಳ ಹಿಂದೆ ಬರೆದದ್ದನ್ನು ಈಗ ಮತ್ತೆ ಓದಿ ನೋಡಿದಾಗ, ಅಭಿಪ್ರಾಯವನ್ನು ಮಾರ್ಪಡಿಸಬೇಕೆಂದು ತೋರಲಿಲ್ಲವಾದರೂ ಕೆಲವು ಕಡೆಗಳಲ್ಲಿ ಉಕ್ತಿ ಕಟುವೆನ್ನಿಸಿತು. ಅಂಥದನ್ನೆಲ್ಲ ಈ ಪರಿಷ್ಕರಣದಲ್ಲಿ ಯಥಾಮತಿಯಾಗಿ ತಿದ್ದಿದ್ದೇನೆ, ತೊಡೆದಿದ್ದೇನೆ. ವಿಕ್ರಮೋರ್ವಶೀಯದ ವಿಷಯದಲ್ಲಿ ನನ್ನ ಅಭಿಪ್ರಾಯವನ್ನು ಒಪ್ಪದವರಿಗೆ ಕೂಡ, ಇಲ್ಲಿ ಅಪಚಾರದ ಮಾತುಗಳೇನೂ

ಕಾಣಲಾರವೆಂದು ನಂಬಿದ್ದೇನೆ. ಭರತಖಂಡದ ಕವಿಕುಲಗುರುವನ್ನು ಕುರಿತು ನನ್ನ ಹೃದಯದಲ್ಲಿರುವ ಅತಿಶಯವಾದ ಮೆಚ್ಚಿಕೆ ಗೌರವಗಳಿಗೆ ತಕ್ಕಮಟ್ಟಿನ ನಿದರ್ಶನ ಇಲ್ಲಿಯ ಬರೆವಣಿಗೆಯಲ್ಲೇ ಉಂಟೆಂದು ನನ್ನ ಭರವಸೆ....ಮಿಕ್ಕ ಪ್ರಬಂಧಗಳಲ್ಲೂ ಅಲ್ಲಲ್ಲಿ ಮಾತುಗಳನ್ನು ಯಥೋಚಿತವಾಗಿ ಸರಿಪಡಿಸಿದೆ; ಆದರೆ ಹೆಚ್ಚು ತಿದ್ದುಪಾಡಿಗೆ ಕೈಹಾಕಿಲ್ಲ. ಕೊನೆಯ ಪ್ರಬಂಧಕ್ಕೆ ಸೇರಿರುವ 'ಪರಿಶಿಷ್ಟ' ಹೊಸದು; ತಾವು ಸಂಗ್ರಹಿಸಿರುವ ವಚನಗಳನ್ನು ಕುರಿತು ಕೆಲವು ವಿವರಗಳನ್ನು ತಿಳಿಸಿದ್ದಕ್ಕಾಗಿ ಶ್ರೀಮಾನ್ ಎಚ್. ದೇವೀರಪ್ಪನವರಿಗೆ ನಾನು ಕೃತಜ್ಞನಾಗಿದ್ದೇನೆ.

ಈ 'ಕಾವ್ಯಸಮೀಕ್ಷೆ'ಯನ್ನು ಪ್ರಕಟಿಸುವ ಭಾರವನ್ನು ವಹಿಸಿದ್ದಕ್ಕಾಗಿ ನನ್ನ ಮಿತ್ರರಾದ ಶ್ರೀಮಾನ್ ಕೂಡಲಿ ಚಿದಂಬರಂ ಅವರಿಗೂ, ಅಂದವಾಗಿ ಅಚ್ಚು ಮಾಡಿರುವುದಕ್ಕಾಗಿ ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸಿನವರಿಗೂ ನನ್ನ ವಂದನೆಗಳು.

ಬೆಂಗಳೂರು
೨೪–೯–೧೯೪೭ ತೀ. ನಂ. ಶ್ರೀಕಂಠಯ್ಯ

## ಕೃತಜ್ಞತೆ

'ಕಾವ್ಯ ಸಮೀಕ್ಷೆ'ಯ ಹಿಂದಿನ ಮುದ್ರಣದ ಪ್ರತಿಗಳು ಮುಗಿದುಹೋಗಿ ಬಹು ದಿನಗಳಾಗಿದ್ದವು. ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಪಾಠ್ಯ ಸಮಿತಿಯ ಅಧಿಕಾರಿಗಳು ಈ ಗ್ರಂಥವನ್ನು ಬಿ.ಎ., ಬಿ.ಎಸ್‌ಸಿ., ಪರೀಕ್ಷಾ ತರಗತಿಗಳಿಗೆ ನಿಯಮಿಸಿದ್ದರಿಂದ ಈ ಮುದ್ರಣಕ್ಕೆ ಅವಕಾಶ ದೊರೆಯಿತು. ಅವರಿಗೂ ಈ ಗ್ರಂಥವನ್ನು ಕಾವ್ಯಾಲಯದ ಮೂಲಕ ಪುನಃ ಮುದ್ರಣ ಮಾಡುವ ಅನುಮತಿಯನ್ನು ಕೊಟ್ಟ ಶ್ರೀ ಶ್ರೀಕಂಠಯ್ಯನವರ ಕುಟುಂಬದವರಿಗೂ ನಮ್ಮ ಕೃತಜ್ಞತೆಯ ವಂದನೆಗಳು ಸಲ್ಲುತ್ತವೆ.

ಪ್ರಕಾಶಕರು

## ವಿವರ

# ಕಾವ್ಯ ಸಮೀಕ್ಷೆ

---

## ಕಾಳಿದಾಸನ ನಾಟಕಗಳಲ್ಲಿ ದುರಂತವಸ್ತು ವಿನ್ಯಾಸ

೧

ಸುಮಾರು ಇಪ್ಪತ್ತೈದು ಶತಮಾನಗಳಿಗೆ ಹಿಂದೆ ಗ್ರೀಸ್ ದೇಶದಲ್ಲಿ ದುರಂತ ನಾಟಕವು ಜನಿಸಿದಂದಿನಿಂದ ಇಂದಿನವರೆಗೂ ಅದು ಪಾಶ್ಚಾತ್ಯ ಸಾಹಿತ್ಯದಲ್ಲಿ ಅಗ್ರಪೀಠವನ್ನು ವಹಿಸಿದೆ. ಈಸ್ಕಿಲಸ್, ಸೋಫೊಕ್ಲೀಸ್, ಯೂರಿಪಿಡೀಸ್, ಷೇಕ್ಸ್ಪಿಯರ್, ಗಯಟೆ, ಇಬ್ಸೆನ್—ಲೋಕವಿಶ್ರುತವಾದ ಈ ಕೆಲವು ಹೆಸರುಗಳನ್ನು ಉಚ್ಚರಿಸಿದರೆ ಸಾಕು ; ದುರಂತ ನಾಟಕದ ಉನ್ನತಿಯನ್ನೂ ವೈವಿಧ್ಯ ವಿಸ್ತಾರಗಳನ್ನೂ ಬೇರೆ ವರ್ಣಿಸಬೇಕಾಗಿಲ್ಲ. ಈ ಬಗೆಯ ನಾಟಕವು ಏರದ ಕವಿತಾಶಿಖರವಿಲ್ಲ, ಶೋಧಿಸದ ಹೃದಯಗಹ್ವರವಿಲ್ಲ. ಇದರಲ್ಲಿ ಕವಿ ಸಾಮಾಜಿಕನನ್ನು ಮರುಗಿಸುವನು, ನಡುಗಿಸುವನು, ಉಬ್ಬಿಸುವನು, ಬೆಗಡುಗೊಳಿಸುವನು ; ಎಂದಿಗೂ ಹರಿಯದ ಜೀವನ ಸಮಸ್ಯೆಯನ್ನು ತಲೆಯಲ್ಲಿ ತುಂಬಿ ರಂಗಮಂದಿರದಿಂದ ಹೊರಗೆ ಕಳಿಸುವನು. ಪಾಶ್ಚಾತ್ಯರಿಗೆ ದುರಂತ ನಾಟಕವು ಕೇವಲ ಕಲೆಯ ಬೆಡಗಲ್ಲ. ಅದು ಆತ್ಮಸಂಸ್ಕಾರದ ಸಾಧನ, ಜೀವನಸಾರದ ಸಾಕ್ಷಾತ್ಕರಣ.

ಜೀವನವು ಹಲವು ವ್ಯಕ್ತಿಗಳ, ಹಲವು ಶಕ್ತಿಗಳ ಕದನಕ್ಷೇತ್ರ. ಒಂದು ಕಡೆ ಮಾನವನು ತನ್ನ ಹವಣಿಗೆ ಮೀರಿದ್ದನ್ನು, ಕೈಗೆ ನಿಲುಕದ್ದನ್ನು ಪಡೆಯಲು ಬಯಸಿ ದೈವದ ಕಾಟಕ್ಕೆ ಸಿಕ್ಕುತ್ತಾನೆ. ಇನ್ನೊಂದುಕಡೆ ತನ್ನ ಸುಖಸಾಧನೆಯಲ್ಲಿ ಮಗ್ನನಾಗಿ ಸಮಾಜದ ಕಟ್ಟಳೆಗೆ ಎದುರುಬೀಳುತ್ತಾನೆ. ಒಮ್ಮೆ ಮಾನವನ ಮನಸ್ಸಿನಲ್ಲೇ ಎರಡು ಕವಲೊಡೆದು ಪಾಪಪುಣ್ಯಗಳಿಗೆ, ಧರ್ಮಕಾಮಗಳಿಗೆ, ಅಥವಾ ಎರಡು ಧರ್ಮಗಳಿಗೇ, ಹೋರಾಟ ಹತ್ತುತ್ತದೆ. ಮತ್ತೊಮ್ಮೆ ತಾನು ಯಾವ ತಪ್ಪನ್ನೂ ಮಾಡದಿದ್ದರೂ ತನ್ನ ಆವರಣವೇ, ತನ್ನ ಜನ್ಮವೇ, ತನಗೆ ಶೂಲವಾಗಿ

ಪರಿಣಮಿಸುತ್ತದೆ. ಒಂದೊಂದು ಸಲ ಗುಣಾಧಿಕ್ಯವೇ ದೋಷಚ್ಛಾಯೆಯನ್ನು ತಾಳುವುದೂ ಉಂಟು. ಅಂತೂ ಈ ಘೋರ ಘರ್ಷಣದ ಫಲವಾಗಿ ಜೀವನರಂಗವು ಮುರಿದ ಬಯಕೆಗಳಿಂದಲೂ ಬಿದ್ದ ದೇಹಗಳಿಂದಲೂ ತುಂಬುತ್ತದೆ. ಇಲ್ಲಿ, ತಪ್ಪಿಗೆ ತಕ್ಕಷ್ಟೇ ಶಿಕ್ಷೆ, ತಪ್ಪಿಗೆ ಮಾತ್ರ ಶಿಕ್ಷೆ ಎಂದು ಯಾರೂ ಹೇಳುವ ಹಾಗಿಲ್ಲ. ಅಲ್ಪವಾದ ಲೋಪದೋಷಗಳೇ ಸನ್ನಿವೇಶಮಹಿಮೆಯಿಂದ ಬೃಹದಾಕಾರವನ್ನು ತಾಳುತ್ತವೆ. ಎಂಥ ಉದಾತ್ತ ಪ್ರಕೃತಿಯ ವೀರನಾದರೂ ಒಂದಲ್ಲ ಒಂದು ಸಲ ಕಾಲುಜಾರದೆ ಇರುವುದಿಲ್ಲ. ಆದರೆ ಅವನ ದುರದೃಷ್ಟದಿಂದ ಅದೇ ವಿಪರೀತವಾಗಿ ಪರಿಣಮಿಸಿ, ಹೆಜ್ಜೆಯಿಟ್ಟಷ್ಟೂ ಕೆಸರಿನ ಆಳ ಹೆಚ್ಚಾಗುತ್ತಾ ಹೋಗುತ್ತದೆ. ಸತ್ತ್ವಶಾಲಿಗಳ ಜೀವನದಲ್ಲಿ ಒದಗುವ ಇಂಥ ವಿಷಮಘಟನೆಗಳನ್ನು ಕಂಡು ನಮ್ಮೆದೆ ತಲ್ಲಣಿಸುತ್ತದೆ; ಅದರ ದುರಂತ ಪರಿಣಾಮವನ್ನು ಕಂಡು ಅಪಾರವಾದ ವಿಷಾದವು ಮೂಡುತ್ತದೆ. ಕೊನೆಯ ಅನಾಹುತವು ಸಂದರ್ಭಕ್ಕೆ ಅನುರೂಪವೆಂದೂ ಹೇಳಲಾರೆವು, ಸರ್ವಥಾ ಅನ್ಯಾಯವೆಂದೂ ಹೇಳಲಾರೆವು. ಅಂತೂ ಬಾಳಿನಲ್ಲಿ ಇದೊಂದು ಅಭೇದ್ಯ ಸಮಸ್ಯೆ. ಇದನ್ನು ನಮ್ಮ ಕಣ್ಣ ಮುಂದೆ ನಿಲ್ಲಿಸುವುದೇ ದುರಂತ ನಾಟಕ.

ಇತ್ತ ನಮ್ಮ ಸಂಸ್ಕೃತ ನಾಟಕಗಳ ಕಡೆ ತಿರುಗಿದರೆ ಅಲ್ಲಿ ಕಾಣುವುದೇನು ? ಇಲ್ಲಿ ಚಿತ್ರಿತವಾಗುವ ಜೀವನದಲ್ಲೂ ಕ್ಲೇಶಸಂಕಟಗಳಿಲ್ಲದೆ ಇಲ್ಲ. ವ್ಯಕ್ತಿ ಶಕ್ತಿಗಳ ಮಸೆದಾಟವಿಲ್ಲದೆ ಇಲ್ಲ. ಆದರೆ ಇವು ಕೊನೆತನಕ ನಿಲ್ಲತಕ್ಕವಲ್ಲ. ಈ ಲೋಕದಲ್ಲೇ ನಮ್ಮ ಕಣ್ಣೆದುರಿಗೇ ಎಲ್ಲಕ್ಕೂ ಪೂರ್ಣ ಸಮನ್ವಯವೊದಗುತ್ತದೆ. ಬಾಳಿನ ಭಿನ್ನ ತಂತುಗಳಿಗೆಲ್ಲ ತೊಡಕು ತಪ್ಪಿ, ಒಂದರೊಡನೊಂದು ಹೊಂದಿಕೊಂಡು ಮಂಗಳ ಸೂತ್ರವಾಗಿ ಮುಗಿಯುತ್ತವೆ. ನಾಟಕದ ವಸ್ತು ಯಾವುದೇ ಆಗಿರಲಿ, ನಡುವೆ ಎಂಥ ವಿಷಮ ಸಂಘಟನೆಗಳೇ ಒದಗಿರಲಿ, ಕೊನೆ ಮಾತ್ರ ಒಂದೇ : ಮಂಗಳ ಶಾಂತಿ. "ದುರಂತ"ವೆಂಬ ಹೆಸರು ಈ ಚಿತ್ರಕ್ಕೆ ಒಪ್ಪಲಾರದು.

ಸಂಸ್ಕೃತ ಸಾಹಿತ್ಯದಲ್ಲಿ ಆದಿಯಿಂದಲೂ ಹೀಗಿರಲಿಲ್ಲ. ನಾಟಕಗಳನ್ನು ಬಿಟ್ಟು "ಇತಿಹಾಸ" ಗಳನ್ನು ಕ್ಷಣಕಾಲ ಪರಿಶೀಲಿಸಿದರೆ ಈ ಅಂಶವು ಸ್ಫುಟವಾಗುತ್ತದೆ. 'ರಾಮಾಯಣ' 'ಮಹಾಭಾರತ' ಗಳಲ್ಲಿ ದುರಂತ ವ್ಯಕ್ತಿಗಳೂ ಸನ್ನಿವೇಶಗಳೂ ಎಷ್ಟೊಂದಿಲ್ಲ! ಮೊದಲು ಅಷ್ಟು ಸರಳೆಯೂ ಸ್ನೇಹಮಯಿಯೂ ಆಗಿದ್ದ ಕೈಕೆಗೆ ಮಂಥರೆಯ ದುರ್ಬೋಧನೆಯಿಂದ ಹೆಬ್ಬಯಕೆ ಹುಟ್ಟಿ ಎಂಥ ಅನರ್ಥದಲ್ಲಿ

ಫಲಿಸಿತು! ರಾಮನ ಅಪವಾದಭೀತಿ ಸೀತೆಗೂ ಅವನಿಗೂ ಎಷ್ಟು ಕ್ಲೇಶ ನಿಷ್ಠುರಗಳನ್ನೊಡ್ಡಿತು; ಎಂಥ ವಿಯೋಗವನ್ನು ತಂದಿತು! ಉದಾರಹೃದಯದ ಕರ್ಣನು ಕುಂತೀಕನ್ಯೆಯ ಗರ್ಭದಲ್ಲಿ ಜನಿಸಿದ್ದೇ ಅವನಿಗೆ ಮೃತ್ಯುವಾಗಿ ಪರಿಣಮಿಸಲಿಲ್ಲವೆ? ಮಹಾವೀರನೂ ಸತ್ಯವ್ರತನೂ ಕುರುಜ್ಯೇಷ್ಠನೂ ಆದ ಭೀಷ್ಮನು ದಾಕ್ಷಿಣ್ಯವಶನಾಗಿ ತನ್ನವರ ಕೈಯಿಂದಲೇ ಸಾಯಲಿಲ್ಲವೆ? ಕಡೆಗೆ ಈ ಎರಡು ಮಹಾಗ್ರಂಥಗಳ ಪ್ರತಿನಾಯಕರಾದ ರಾವಣದುರ್ಯೋಧನರ ವೃತ್ತಾಂತವೂ ಬೇರೆಯಲ್ಲ. ರಾವಣನ ತೇಜಸ್ಸಿಗೆ ಸ್ತ್ರೀವ್ಯಾಮೋಹದ ಕಳಂಕವೊಂದು ತಗುಲದಿದ್ದರೆ ಅವನ ಸಮಾನರು ಯಾರು? ಮಹಾಸತ್ತ್ವನೂ ಅಭಿಮಾನಧನನೂ ಆದ ದುರ್ಯೋಧನನಿಗೆ ಛಲದ ಹುಚ್ಚು ಹಿಡಿದು ಊರುಭಂಗವಾಯಿತು. ಇಷ್ಟೇ ಅಲ್ಲ. ಈ ಎರಡು ಇತಿಹಾಸಗಳ ಪರ್ಯವಸಾನವೇ ಮಹಾ ವಿಷಾದದಲ್ಲಿ. ಗ್ರಂಥವು ಮಂಗಳಾಂತವೇ ಆಗಬೇಕೆಂಬ ಹಠ ಅವುಗಳ ಕರ್ತೃಗಳಿಗಿದ್ದಂತೆ ತೋರುವುದಿಲ್ಲ.

ಸಂಸ್ಕೃತ ನಾಟಕದಲ್ಲಿ ಮಾತ್ರ ಈ ದೃಷ್ಟಿವೈಶಾಲ್ಯವು ತಪ್ಪಿಹೋಗಿದೆ. ಇದುವರೆಗೆ ದೊರೆತಿರುವ ನಾಟಕಗಳಲ್ಲೆಲ್ಲಾ ಭಾಸನ 'ಊರುಭಂಗ'ವೊಂದೇ ದುರಂತ ನಾಟಕವೆಂಬ ಹೆಸರಿಗೆ ಅರ್ಹವಾದದ್ದು. ಅದಕ್ಕೆ ಕೂಡ ಆ ಹೆಸರನ್ನು ಕೊಡಲೊಪ್ಪದ ವಿದ್ವಾಂಸರಿದ್ದಾರೆ.[1] ಅವರ ವಾದವು ವಿಚಾರದ ಮುಂದೆ ನಿಲ್ಲಲಾರದೆಂಬುದು ನಿಜ. ಆದರೆ ಊರುಭಂಗವು ಸಂಸ್ಕೃತ ಸಾಹಿತ್ಯದಲ್ಲಿ ಅಡ್ಡಪಂಕ್ತಿಯ ಕೃತಿಯೆಂದು ಮಾತ್ರ ಒಪ್ಪಿಕೊಳ್ಳಬೇಕು. ಸಾಮಾನ್ಯವಿಧಿಗೆ ಅದು ಒಂದು ಅಪವಾದವಿದ್ದಂತೆ.—ನಮ್ಮ ದೇಶದಲ್ಲಿ ದುರಂತ ನಾಟಕದ ಈ ಅತ್ಯಂತಾಭಾವಕ್ಕೆ ಏನು ಕಾರಣ? ಕರ್ಮವಾದವನ್ನು ನಂಬಿದ್ದರಿಂದ ನಮ್ಮವರಿಗೆ ಈ ಬಗೆಯ ಕೃತಿಗಳನ್ನು ರಚಿಸುವುದು ಅಸಾಧ್ಯವಾಯಿತೆ? ಅಥವಾ ಆರಂಭಕಾಲದಿಂದಲೂ ಸಂಸ್ಕೃತ ನಾಟಕವು ಮಂಗಳಾಂತದ ನಿಯಮಕ್ಕೆ ಸೆರೆಸಿಕ್ಕಿದ್ದರಿಂದ ಈ ಬಗೆಯ ಬೆಳೆವಳಿಗೆಯನ್ನು ಕಳೆದುಕೊಂಡಿರಬಹುದೆ? ಇದು ಮುಖ್ಯವಾದ ಪ್ರಶ್ನೆಯಾದರೂ ಇದರ ವಿವೇಚನೆ ನಮಗೆ ಸದ್ಯದಲ್ಲಿ ಪ್ರಸಕ್ತವಲ್ಲ. ಕಾರಣ ಏನೇ ಆಗಿರಲಿ; ಸಂಸ್ಕೃತ ನಾಟಕಕಾರರಿಗೆ ಜೀವನವನ್ನೂ ವ್ಯಕ್ತಿಗಳನ್ನೂ ದುರಂತವಾಗಿ ಪ್ರತಿಪಾದಿಸುವ ಅಭ್ಯಾಸವು ಬರಲಿಲ್ಲ. ಅವರು ಹಿಂದಿನ ಪುರಾಣೇತಿಹಾಸಗಳಿಂದ ದುರಂತ ಸನ್ನಿವೇಶಗಳನ್ನು ಆರಿಸಿಕೊಂಡರೂ ಅವಕ್ಕೆ ಹೊಸ ಬಣ್ಣವನ್ನು ಕಟ್ಟು

[1] A. B. Keith, *The Sanskrit Drama*, pp. 38, 278.

ತ್ತಾರೆ. ಕಥೆಯನ್ನು ವಿಷಾದಗತಿಯಲ್ಲೇ ನಡಸಿಕೊಂಡು ಬಂದರೂ ಅದರ ಕೊನೆಯಲ್ಲಿ ಮಂಗಳವನ್ನು ಹಾಡುತ್ತಾರೆ. ಮಿಕ್ಕವರ ಮಾತಿರಲಿ ; ಈ ಆಕ್ಷೇಪಣೆಯಿಂದ ಕಾಳಿದಾಸ ಭವಭೂತಿಗಳು ಕೂಡ ತಪ್ಪಿಸಿಕೊಳ್ಳುವಂತಿಲ್ಲ.

ನಾಟಕವು ಮಂಗಳಾಂತವಾದ ಮಾತ್ರಕ್ಕೇ ಕೆಟ್ಟುಹೋಗುವುದೆಂದು ಮೇಲಿನ ಮಾತಿಗೆ ಅರ್ಥವಲ್ಲ. ಎಲ್ಲ ಸಂದರ್ಭಗಳಿಗೂ ದುರಂತ ದೃಷ್ಟಿ ಸರಿಹೋಗತಕ್ಕದ್ದೂ ಅಲ್ಲ. ಜೀವನವು ಬಹುಮುಖವಾದದ್ದು. ಎಷ್ಟೋ ವೇಳೆ ಒಂದೇ ಸನ್ನಿವೇಶವನ್ನು ಬೇರೆ ಬೇರೆ ದೃಷ್ಟಿಗಳಿಂದ ಅವಲೋಕಿಸುವುದು ಸಾಧ್ಯ ; ಅವುಗಳಲ್ಲಿ ಯಾವುದನ್ನು ಅವಲಂಬಿಸಿದರೆ ಉತ್ತಮವೂ ಅರ್ಥಪೂರ್ಣವೂ ಆದ ಫಲವು ದೊರೆಯುತ್ತದೋ ಅದನ್ನೇ ನಾಟಕಕಾರನು ಸಾಮಾನ್ಯವಾಗಿ ಅಂಗೀಕರಿಸಬೇಕು. ಆದರೆ ಕೆಲವು ಸನ್ನಿವೇಶಗಳಲ್ಲಾದರೂ ದುರಂತ ದೃಷ್ಟಿಯ ತ್ಯಾಗವು ಅಸಮಂಜಸವಾಗಬಹುದು. ಮಹಾಕವಿ ಕೂಡ ಈ ಔಚಿತ್ಯನಿಯಮವನ್ನು ಮೀರಿದರೆ ಅವನ ಕೃತಿಪಾಕವು ಹದತಪ್ಪಿ ಹೋಗಬಹುದು. ಇನ್ನು ಕೆಲವು ವೇಳೆ ಕವಿಯ ಮಂಗಳಾಕಾಂಕ್ಷೆಯಿಂದ ಹಳೆಯ ಕಥೆಗೆ ಹೊಸ ಕಳೆಯೊಂದು ಬರಬಹುದು ; ಈ ಬಗೆಯ ಪ್ರತಿಪಾದನೆಯಿಂದಲೇ ಅದು ಸುಸಂಬದ್ಧವೂ ಲೋಕೋತ್ತರವೂ ಆಗಬಹುದು. ಆ ಸಮಯದಲ್ಲಿ ಕವಿಯ ಕಾರ್ಯಕ್ಕೆ ಬೇರೆ ಯಾವ ಸಮರ್ಥನೆಯೂ ಬೇಕಿಲ್ಲ.

ಕಾಳಿದಾಸನ 'ವಿಕ್ರಮೋರ್ವಶೀಯ'ವೂ 'ಅಭಿಜ್ಞಾನ ಶಾಕುಂತಲ'ವೂ ನಾಟಕದ ಪ್ರಸಿದ್ಧ ಸಂಪ್ರದಾಯದಂತೆ ಮಂಗಳದಲ್ಲಿ ಮುಗಿದಿರತಕ್ಕವು. ಇವಕ್ಕೆ ತಳಹದಿಯಾದ ಪ್ರಾಚೀನ ಕಥೆಗಳೆರಡೂ ತಿರುಳಿನಲ್ಲಿ ದುರಂತವಾಗಿರತಕ್ಕವು. ಈ ಮೂಲವಸ್ತುವನ್ನು ಕಾಳಿದಾಸನು ಹೇಗೆ ಬಳಸಿದ್ದಾನೆ, ಬೆಳೆಸಿದ್ದಾನೆ ; ದೃಷ್ಟಿಭೇದದಿಂದ ಲಾಭನಷ್ಟಗಳೇನಾದರೂ ಉಂಟಾಗಿವೆಯೆ?—ಇದರ ವಿವೇಚನೆಯೇ ಪ್ರಸ್ತುತ ಲೇಖನದ ಉದ್ದೇಶ.

೨

ಉರ್ವಶೀ-ಪುರೂರವರ ಪ್ರಣಯಪ್ರಸಂಗವು ತುಂಬ ಪುರಾತನವಾದ ಕಥೆ.[2] 'ಋಗ್ವೇದ'ದಲ್ಲಿಯೇ ಇವರನ್ನು ನಾವು ಮೊದಲು ನೋಡುತ್ತೇವೆ. ಇವರಿಬ್ಬರಿಗೆ

---

[2] ಇದು ಬರಿಯ ಕಥೆಯಲ್ಲ. ಇಲ್ಲಿ ಪುರೂರವನೇ ಸೂರ್ಯ, ಊರ್ವಶಿಯೇ ಉಷಸ್ಸು. ತಮ್ಮ ಪ್ರಥಮ ಸಮಾಗಮವು ಮುರಿದ ಬಳಿಕ, ಕಣ್ಣು ಮರೆಯಾದ

ನಡೆದ ಒಂದು ಸಂವಾದವು ಅಲ್ಲಿಯ ಒಂದು ಸೂಕ್ತದ (X. ೯೫) ತುಂಬ ಇದೆ. ಅದರ ವಾಕ್ಯವಾಕ್ಯಕ್ಕೂ ಅರ್ಥವು ಸ್ಫುಟವಾಗದಿದ್ದರೂ ಅಭಿಪ್ರಾಯವನ್ನು ಗ್ರಹಿಸುವುದೇನೂ ಕಷ್ಟವಲ್ಲ. 'ಶತಪಥಬ್ರಾಹ್ಮಣ'ದಲ್ಲಿ (xi. ೫. ೧) ಈ ಸಂವಾದದ ವಿವರಣೆ ವಿನಿಯೋಗಗಳೂ ಅದಕ್ಕೆ ಮೊದಲು ನಡೆದ ಕಥೆಯ ನಿರೂಪಣೆಯೂ ತಕ್ಕನುಟ್ಟಿಗೆ ದೊರೆಯುತ್ತವೆ. ಇದೆಲ್ಲದರ ಆಧಾರದಿಂದ ವೈದಿಕ ಯುಗದಲ್ಲಿ ಈ ಕಥೆಯ ಸ್ವರೂಪವೇನೆಂಬುದನ್ನು ಗ್ರಹಿಸಬಹುದು.

ಊರ್ವಶಿ ಒಬ್ಬ ಅಪ್ಸರೆ; ಪುರೂರವನು ಚಂದ್ರವಂಶದ ದೊರೆ. ಅವನನ್ನು ವರಿಸುವಾಗ ಆಕೆ ಕೆಲವು ನಿಬಂಧನೆಗಳನ್ನು ಮಾಡಿಕೊಂಡಳು; ತನ್ನ ಕಣ್ಣಿಗೆ ಅವನು ನಗ್ನನಾಗಿದ್ದಾಗ ಕಾಣಿಸಿಕೊಳ್ಳಕೂಡದೆಂಬುದು ಇವುಗಳಲ್ಲಿ ಒಂದು. ನಾಲ್ಕು ವರ್ಷಗಳನ್ನು ಇಬ್ಬರೂ ಒಟ್ಟಿಗೆ ಕಳೆದರು; ಊರ್ವಶಿ ಗರ್ಭವತಿಯೂ ಆದಳು. ಈ ನಡುವೆ ಅವಳ ಸಹವಾಸವನ್ನು ಕಳೆದುಕೊಂಡಿದ್ದ ಗಂಧರ್ವರು ಮತ್ತೆ ಅವಳನ್ನು ಪಡೆಯಬೇಕೆಂದು ಆಲೋಚಿಸಿ ಒಂದು ಉಪಾಯವನ್ನು ಹೂಡಿದರು. ಒಂದು ರಾತ್ರಿ ಊರ್ವಶಿಯ ಮಂಚಕ್ಕೆ ಕಟ್ಟಿದ್ದ ಎರಡು ಮುದ್ದಿನ ಮರಿ ಟಗರುಗಳಲ್ಲಿ ಒಂದಾಗುತ್ತಲೊಂದನ್ನು ಅಪಹರಿಸಿಕೊಂಡು ಹೋದರು. ಅದನ್ನು ಊರ್ವಶಿ ಕಂಡು "ಇಲ್ಲಿ ವೀರನಿಲ್ಲ ಗಂಡಸಿಲ್ಲ ಎಂಬ ಹಾಗೆ ನನ್ನ ಮುದ್ದಿನ ಕಂದನನ್ನು ಅಪಹರಿಸುತ್ತಿದ್ದಾರೆ" ಎಂದು ಎರಡು ಸಲವೂ ಕೂಗಿಕೊಂಡಳು. ಆಗ ಪುರೂರವನ ಮನಸ್ಸು ಚುಚ್ಚಿ, ಅವನು "ನಾನಿರುವಾಗ ವೀರನಿಲ್ಲವೆ ಗಂಡಸಿಲ್ಲವೆ?" ಎಂದುಕೊಂಡು, ಒಟ್ಟೆಬರೆ ಹಾಕಿಕೊಂಡರೆ ಕಾಲವಿಳಂಬವಾದೀತೆಂದು ಥಟ್ಟನೆ ನಗ್ನತೆಯಲ್ಲೇ ಕಳ್ಳರ ಹಿಂದೆ ನೆಗೆದನು. ಆ ಸಮಯಕ್ಕೆ ಸರಿಯಾಗಿ ಗಂಧರ್ವರು ದೊಡ್ಡ ಮಿಂಚೊಂದನ್ನು ಸೃಷ್ಟಿಸಿದರು. ಹಗಲಿನಂಥ ಅದರ ಬೆಳಕಿನಲ್ಲಿ ಊರ್ವಶಿ ಪುರೂರವನ ನಗ್ನತೆಯನ್ನು ಕಂಡಳು; ಮತ್ತೆ

---

ಉಷೆಯನ್ನು ಹುಡುಕಿಕೊಂಡು ಸೂರ್ಯನು ಭಗ್ನಹೃದಯದಿಂದ ತೊಳಲುವನೆಂಬ ಪ್ರಾಕೃತಿಕ ದೃಶ್ಯವೇ ಈ ಕಥೆಯಾಗಿ ಪರಿಣಮಿಸಿರಬಹುದು. ಪ್ರಕೃತಿಯ ವಿಸ್ತಾರದಲ್ಲಿ ಪ್ರಾಚೀನರ ಕಣ್ಣಿಗೆ ತೋರಿಬಂದ ದುರಂತ ಭಾವವೇ ಅವರು ರಚಿಸಿದ ಮಾನವ ದುರಂತ ಕಥೆಗಳಿಗೆ ಜೀವನಾಧಾರವಾಗಿರಬಹುದು—ಹೀಗೆಂದು ಮ್ಯಾಕ್ಸ್ ಮುಲರ್ ಪಂಡಿತರ ಅಭಿಪ್ರಾಯ. (*Chips from a German Workshop*, Vol. IV. pp. 107-116).

ಬರುವೆನೆಂದು ನುಡಿದು ಒಡನೆಯೇ ಅಂತರ್ಧಾನವಾದಳು. ಅವಳ ವಿಯೋಗಕ್ಕೆ ತುಂಬ ಹಲುಬುತ್ತಾ ಅಲೆಯುತ್ತಾ ಪುರೂರವನು ಕುರುಕ್ಷೇತ್ರಕ್ಕೆ ಬಂದನು. ಅನ್ಯತಃಪ್ಲಕ್ಷವೆಂಬ ಕೊಳದ ತೀರದಲ್ಲಿ ಅವನು ಹೋಗುತ್ತಿದ್ದಾಗ, ಅಲ್ಲಿ ತನ್ನ ಸಖಿಯರೊಂದಿಗೆ ಜಲಕೇಳಿಯಲ್ಲಿದ್ದ ಊರ್ವಶಿ ಅವನನ್ನು ಕಂಡು ಗುರುತಿಸಿದಳು; ಸಖಿಯರ ಕೋರಿಕೆಯಂತೆ ಅವನಿಗೆ ಕಾಣಿಸಿಕೊಂಡಳು. ಆಗ ಅವರಿಬ್ಬರಿಗೂ ನಡೆದ ಸಂವಾದವನ್ನು ಋಗ್ವೇದದ ಸೂಕ್ತವು ನಿರೂಪಿಸುತ್ತದೆ. ಪುರೂರವನು "ಓ ಘೋರ ಮಾನಸೆ, ನಿಲ್ಲು. ನಿನ್ನೊಂದಿಗೆ ಎರಡು ಮಾತಾಡಬೇಕು" ಎಂದು ಬೇಡಿದರೆ, ಅವಳು "ನಿನ್ನ ಮಾತಿನಿಂದ ನನಗೇನು ಕೆಲಸ ? ಮೊಟ್ಟಮೊದಲ ಉಷಸ್ಸಿನಂತೆ ನಾನು ಅತಿಕ್ರಾಂತಳಾಗಿದ್ದೇನೆ. ಮನೆಗೆ ಹಿಂದಿರುಗು. ಗಾಳಿಯಂತೆ ನನ್ನನ್ನೂ ಹಿಡಿಯಲಾಗುವುದಿಲ್ಲ" ಎಂದು ಉತ್ತರ ಕೊಡುತ್ತಾಳೆ. ಅದಕ್ಕೆ ಪುರೂರವನು ಅವಳನ್ನು ಕಳೆದುಕೊಂಡಂದಿನಿಂದಲೂ ತಾನು ವೀರಕಾರ್ಯಗಳನ್ನೆಲ್ಲಾ ಬಿಟ್ಟು ಅಲೆಯುತ್ತಿರುವುದಾಗಿ ತಿಳಿಸಿ, ತನ್ನಲ್ಲಿ ಅವಳಿಗಿದ್ದ ಅನುರಾಗಾತಿಶಯವನ್ನು ಜ್ಞಾಪಿಸುತ್ತಾನೆ. ಆದರೆ ಮರ್ತ್ಯರಿಗೂ ಅಮರ್ತ್ಯರಿಗೂ ಸಂಬಂಧವು ಶಾಶ್ವತವಲ್ಲವೆಂದೂ, ತನ್ನ ಮಾತನ್ನು ಕೇಳದಿದ್ದುದು ತಪ್ಪೆಂದೂ ಊರ್ವಶಿ ಸೂಚಿಸುತ್ತಾಳೆ. "ನನ್ನ ಗರ್ಭದಲ್ಲಿರುವ ಮಗನನ್ನು ನಿನ್ನ ಬಳಿಗೆ ಕಳಿಸುತ್ತೇನೆ. ನೀನು ಮನೆಗೆ ಹಿಂದಿರುಗು. ನನ್ನನ್ನು ತಡೆಯಲಾರೆ, ಮೂಢ!" ಎನ್ನುತ್ತಾಳೆ. ಪುರೂರವನು "ನಾನು ಮತ್ತೆ ಹಿಂದಿರುಗದ ಕಡೆಗೆ ಹೋಗುತ್ತೇನೆ. ಪ್ರಾಣ ಕಳೆದುಕೊಳ್ಳುತ್ತೇನೆ. ತೋಳಗಳ ಬಾಯಿಗೆ ಬೀಳುತ್ತೇನೆ" ಎಂದು ಉದ್ವೇಗಪಡುತ್ತಾನೆ. ಆಗ ಊರ್ವಶಿ, "ಪುರೂರವ, ಸಾಯಬೇಡ :

—ನ ವೈ ಸ್ತ್ರೈಣಾನಿ ಸಖ್ಯಾನಿ ಸಂತಿ
ಸಾಲಾವೃಕಾಣಾಂ ಹೃದಯಾನ್ಯೇತಾ—

ಹೆಂಗಸರೊಂದಿಗೆ ಕೆಳೆ ಇಲ್ಲ; ಅವರದು ತೋಳ ಹೃದಯ" ಎಂದು ಉತ್ತರ ಕೊಡುತ್ತಾಳೆ. "ಹಿಂದಕ್ಕೆ ಬಾ—ನನ್ನೆದೆ ಬೇಯುತ್ತಿದೆ" ಎಂದು ಪುರೂರವನು ಅಂಗಲಾಚಿದರೂ ಅವಳು ಕರಗದೆ, "ನೀನು ಮರ್ತ್ಯ. ನಿನ್ನ ಸಂತತಿ ಹವಿಸ್ಸಿನಿಂದ ದೇವತೆಗಳನ್ನು ತೃಪ್ತಿಪಡಿಸಲಿ; ನನ್ನೊಂದಿಗೆ ಸ್ವರ್ಗದಲ್ಲಿ ವಿಹರಿಸುವೆ" ಎಂದು ಮಾತು ಮುಗಿಸುತ್ತಾಳೆ. ಇಲ್ಲಿಗೆ ಋಗ್ವೇದದ ವೃತ್ತಾಂತವು ಮುಗಿಯು

ತ್ತದೆ ; ಕಥೆಯೂ ನಿಲ್ಲಬೇಕು. ಆದರೆ ಶತಪಥಬ್ರಾಹ್ಮಣವು ಅದನ್ನು ಮುಂದುವರಿಸುತ್ತದೆ.—ಯಾಗಾಗ್ನಿಮಥನವಿಧಿಯ ಮಹತ್ತ್ವವನ್ನು ಬೋಧಿಸಲು ಆ ರೀತಿ ಮಾಡಬೇಕಾಯಿತೇನೋ. ಇಲ್ಲಿ ಪುರೂರವನ ದೀನಾವಸ್ಥೆಗೆ ಉರ್ವಶಿ ಕಡೆಗೆ ಮರುಗಿ, ಅಂದಿಗೆ ವರುಷಕ್ಕೆ ಸರಿಯಾಗಿ ಒಂದಿರುಳು ತನ್ನ ಸಹವಾಸವನ್ನು ಅವನಿಗೆ ಕರುಣಿಸುತ್ತಾಳೆ. ಆ ವೇಳೆಗೆ ಪುತ್ರನೂ ಜನಿಸಿರುತ್ತಾನೆ. ಪುರೂರವನು ಅವಳ ಸಲಹೆಯಂತೆ ಮರುದಿನ ಗಂಧರ್ವರಿಂದ ತಾನೂ ಅವರಲ್ಲೊಬ್ಬನಾಗುವಂತೆ ವರವನ್ನು ಪಡೆಯುತ್ತಾನೆ. ಅದನ್ನು ಸಾಧಿಸಲು ಅವರು ಅಗ್ನಿಮಥನವಿಧಿಯನ್ನು ಅವನಿಗೆ ಉಪದೇಶಿಸುತ್ತಾರೆ. ಅದರಂತೆ ಆಚರಿಸಿ ಯಜ್ಞಗಳನ್ನು ನಡಸಿ ಪುರೂರವನೂ ಗಂಧರ್ವತ್ವವನ್ನು ಹೊಂದುತ್ತಾನೆ. ಶತಪಥಬ್ರಾಹ್ಮಣವು ಹೇಳದಿದ್ದರೂ ಈ ಅಮರ್ತ್ಯಜನ್ಮದಲ್ಲಿ ಉರ್ವಶಿಯನ್ನೂ ಮತ್ತೆ ಹೊಂದುತ್ತಾನೆಂದು ಊಹಿಸಬಹುದು.

ಶತಪಥಬ್ರಾಹ್ಮಣದ ನಿರೂಪಣೆಯನ್ನು ಪುರಾಣಯುಗವೂ[3] ಅನುಸರಿಸುತ್ತದೆ. ಆದರೆ ವಿವರಗಳಲ್ಲಿ ಆಗಲೆ ಹಲವು ವ್ಯತ್ಯಾಸಗಳು ಕಾಣಿಸುತ್ತವೆ. ಉದಾ

---

[3] 'ಪದ್ಮಪುರಾಣ' ದಲ್ಲೂ (ಆನಂದಾಶ್ರಮದ ಪರಿಷ್ಕರಣ—ಸೃಷ್ಟಿಖಂಡ, ೧೨) 'ಮತ್ಸ್ಯಪುರಾಣ' ದಲ್ಲೂ (xxiv) ಬರುವ ಉರ್ವಶೀ-ಪುರೂರವರ ವೃತ್ತಾಂತವೇ ಬೇರೆ. ಅದು ಕಾಳಿದಾಸನ ನಾಟಕದ ಕಥೆಗೆ ಹೆಚ್ಚು ಹತ್ತಿರವಾಗಿದೆ. ವಿಕ್ರಮೋರ್ವಶೀಯದಲ್ಲಿರುವಂತೆ ಇಲ್ಲಿಯೂ ಪುರೂರವನು ಉರ್ವಶೀ ಚಿತ್ರಲೇಖೆಯರನ್ನು ಕೇಶಿ ದಾನವನ ಸೆರೆಯಿಂದ ಬಿಡಿಸುತ್ತಾನೆ. ಅದಕ್ಕೆ ಇಂದ್ರನು ಸಂತೋಷಪಟ್ಟು ಉರ್ವಶಿಯನ್ನೇ ಪುರೂರವನಿಗೆ ಅನುಗ್ರಹಿಸುತ್ತಾನೆ. ಒಂದು ಸಲ, ಭರತಮುನಿಯು ವಿರ್ಮಾಡಿಸಂತೆ ಲಕ್ಷ್ಮೀಸ್ವಯಂವರವೆಂಬ ನಾಟಕವನ್ನು ಆಡುತ್ತಿದ್ದಾಗ, ಎದುರಿಗೆ ಕುಳಿತಿದ್ದ ಪುರೂರವನನ್ನು ಲಕ್ಷ್ಮೀವೇಷದಲ್ಲಿದ್ದ ಉರ್ವಶಿ ನೋಡಿ ಕಾಮಪೀಡಿತಳಾಗಿ ಅಭಿನಯವನ್ನು ಮರೆಯುತ್ತಾಳೆ. ಭರತನು ಅದರಿಂದ ಕೋಪಗೊಂಡು, ಐವತ್ತೈದು ವರುಷಗಳ ಕಾಲ ನೀನು ಲತೆಯಾಗಿ ಪರಿಣಮಿಸಿ ಪ್ರಿಯವಿಯೋಗವನ್ನು ಹೊಂದು ಎಂದು ಶಪಿಸುತ್ತಾನೆ. ಆ ಶಾಪವು ಕಳೆದ ಮೇಲೆ ಉರ್ವಶಿ ಪುರೂರವನನ್ನು ಮತ್ತೆ ಹೊಂದಿ ಎಂಟು ಜನ ಮಕ್ಕಳನ್ನು ಪಡೆಯುತ್ತಾಳೆ.—ಮಿಕ್ಕ ಕಡೆಗಳಲ್ಲಿ ಪ್ರಮುಖವಾಗಿರುವ ಉರ್ವಶಿಯ ನಿಬಂಧನೆಗಳ ಮಾತೇ ಈ ನಿರೂಪಣೆಯಲ್ಲಿಲ್ಲ. ಪುರಾಣಗಳ ಕಾಲವು ತುಂಬ ಅನಿಶ್ಚಿತವಾಗಿರುವುದರಿಂದ, ಕಾಳಿದಾಸನ ನಾಟಕಕ್ಕೆ ಈ ಪಾಠವು ಮೂಲವೋ ಅಥವಾ ಅವನ ನಾಟಕವನ್ನೇ ಅನುಸರಿಸಿ ಇದು ಹುಟ್ಟಿತೋ ಹೇಳುವುದು ಕಷ್ಟ.

ಹರಣೆಗೆ, 'ವಿಷ್ಣುಪುರಾಣ' ದಂತೆ (iv, ೬), ಉರ್ವಶಿಗೆ ಭೂಲೋಕವಾಸವು ಮಿತ್ರಾವರುಣರ ಶಾಪದಿಂದ ಸಂಭವಿಸುತ್ತದೆ. ಪುರೂರವನೊಂದಿಗೆ ಅರುವತ್ತೊಂದು ವರುಷಗಳ ಸುಖಜೀವನದಲ್ಲಿ ಅವಳು ದೇವಲೋಕದ ಹಂಬಲವನ್ನೇ ಮರೆಯುತ್ತಾಳೆ. ಮುಂದಾದರೂ ಅವನನ್ನು ಬಿಟ್ಟುಹೋಗುವುದು ಗಂಧರ್ವರ ತಂತ್ರದಿಂದಲೇ. ಬಳಿಕ ಇಬ್ಬರಿಗೂ ನಡೆಯುವ ಸಂವಾದದಲ್ಲಿ ಉರ್ವಶಿಯ ಬಾಯಿಂದ ಯಾವ ಪರುಷವಾಕ್ಯಗಳೂ ಹೊರಡುವುದಿಲ್ಲ; ಪುರೂರವನಲ್ಲಿ ಅವಳಿಗೆ ಆದರವಿದೆ. ಇಷ್ಟಾದರೂ ಅವನು ನಿರ್ದಿಷ್ಟಯಜ್ಞವನ್ನು ನಡಸಿ ಗಂಧರ್ವದೇಹವನ್ನು ಪಡೆದ ಮೇಲೆಯೇ ಅವರಿಬ್ಬರಿಗೂ ನಿತ್ಯಸಹವಾಸ ದೊರೆಯುವುದು.

ಋಗ್ವೇದದಿಂದ ಶತಪಥಬ್ರಾಹ್ಮಣಕ್ಕೆ, ಶತಪಥಬ್ರಾಹ್ಮಣದಿಂದ ವಿಷ್ಣುಪುರಾಣಕ್ಕೆ ಕಥೆಯ ಮೂಲಸೂತ್ರವು ಕೊಂಚ ಕೊಂಚ ಬದಲಾಯಿಸುತ್ತಾ ಹೋಗಿದೆ. ಇವುಗಳಲ್ಲಿ ಋಗ್ವೇದದಿಂದ ವ್ಯಕ್ತವಾಗುವ ವೃತ್ತಾಂತವೇ ಹೆಚ್ಚು ಅರ್ಥಪೂರ್ಣವೆಂದು ತೋರುತ್ತದೆ. ಈ ಉಪಾಖ್ಯಾನದಲ್ಲಿ ಒಂದೆರಡು ವಿಷಯಗಳು ತುಂಬ ಸ್ಫುಟವಾಗಿವೆ. ವೈದಿಕ ಕಥೆಯಲ್ಲಿರುವಂತೆ ಉರ್ವಶಿ ಪುರೂರವನನ್ನು ಮೋಹಿಸಿ ಭೂಮಿಗೆ ಬಂದಿದ್ದರೂ ಸರಿಯೆ, ವಿಷ್ಣುಪುರಾಣದಲ್ಲಿರುವಂತೆ ಮಿತ್ರಾವರುಣರ ಶಾಪವು ಇಲ್ಲಿಗೆ ಕಳಿಸಿದ್ದರೂ ಸರಿಯೆ—ಅವಳು ದೇವಗಣಿಕೆ, ಗಂಧರ್ವರ ಮನಃಪ್ರಿಯೆ ಎಂಬುದನ್ನು ಮರೆಯಬಾರದು. ಸ್ವರ್ಗದ ವೈಭವವಿಲಾಸಗಳನ್ನರಿತವಳಿಗೆ ಒಬ್ಬ ಮಾನವನೊಂದಿಗೆ ಅವಿಭಕ್ತ ಸಂಬಂಧವು ಎಷ್ಟು ದಿನ ರುಚಿಸಬಹುದು! "ನ ವೈ ಸ್ತ್ರೈಣಾನಿ ಸಖ್ಯಾನಿ ಸಂತಿ" ಎಂದು ಹೇಳತಕ್ಕವಳು ಅವಳು. ಪುರೂರವನ ಸಂಗಡ ನಾಲ್ಕು ವರುಷ ಇದ್ದಷ್ಟಕ್ಕೇ ಅವಳು ತಣಿದುಹೋದಳು. ತಾನು ಅವನನ್ನು ಕೈಬಿಡುವುದಕ್ಕೆ ನೆವ ದೊರೆತಕೂಡಲೆ ದೇವಲೋಕಕ್ಕೆ ಜಾರಿದಳು. ಅದೂ ಎಂಥ ನೆವ! ಪುರೂರವನು ಆ ವಿಚಿತ್ರ ನಿಬಂಧನೆಯನ್ನು ಮುರಿದದ್ದಾದರೂ ಅವಳ ಮುದ್ದಿನ ಮರಿಗಳನ್ನು ಕಾಪಾಡುವುದಕ್ಕಾಗಿ—

---

ಕಾಳಿದಾಸನನ್ನು ಪದ್ಮಪುರಾಣವು ಅನುಸರಿಸಿರುವ ಸಂಭವವೇ ಹೆಚ್ಚೆಂದು ತೋರುತ್ತದೆ. (ಪರಿಶಿಷ್ಟವನ್ನು ನೋಡಿ).

ಮಹಾಭಾರತದಲ್ಲಿ ಉರ್ವಶಿ ಪುರೂರವನ ಪತ್ನಿಯೆಂದು ಮಾತ್ರ ಗೊತ್ತಾಗುತ್ತದೆ. (ಮಹಾಭಾರತ : ಪುಣೆಯ ಭಾಂಡಾರ್‌ಕರ್ ಸಂಸ್ಥೆಯ ಪರಿಷ್ಕರಣ—ಆದಿಪರ್ವ, ೭೦. ೨೧.) ಆದರೆ ಅವರಿಬ್ಬರ ವಿಯೋಗಸಮಾಗಮಗಳ ಪ್ರಸಕ್ತಿ ಇಲ್ಲ.

ಗಂಧರ್ವರ ತಂತ್ರಕ್ಕೆ ಒಳಗಾಗಿ. ಆದರೆ ಊರ್ವಶಿ ಇದೊಂದನ್ನೂ ಎಣಿಸಲಿಲ್ಲ. ಪುರೂರವನ ಪರಮವೇದನೆಯನ್ನು ಗಮನಿಸಲಿಲ್ಲ. ತನ್ನವರೊಂದಿಗೆ ನಡೆದು ಬಿಟ್ಟಳು.

ದೇವತೆಗಳಲ್ಲಿ ಈ ಬಗೆಯ ವರ್ತನೆ ಅಪೂರ್ವವೇನೂ ಅಲ್ಲ. ಗಂಗೆ ಶಾಪವಶದಿಂದ ಮನುಷ್ಯರೂಪಿಣಿಯಾಗಿ ಶಂತನುವಿನ ಪತ್ನಿಯಾದಾಗ, ಇಂಥದೇ ಒಂದು ಅಸಂಗತವಾದ ನಿಬಂಧನೆಯನ್ನು ಮಾಡಿಕೊಳ್ಳಲಿಲ್ಲವೆ ? ಅದನ್ನು ಮುರಿದನೆಂಬ ವ್ಯಾಜದಿಂದ ಅವನನ್ನು ತೊರೆದುಬಿಡಲಿಲ್ಲವೆ ? ಈ ದೇವತೆಯರೆಲ್ಲ ಯಾವುದೋ ಒಂದು ನಿಮಿತ್ತಕ್ಕಾಗಿ ಮಾನವನ ಸಖ್ಯವನ್ನು ಬಯಸತಕ್ಕವರು ; ಅದು ಮುಗಿದ ಕೂಡಲೇ ತಮ್ಮ ಪಾಡಿಗೆ ತಾವು ಹೊರಟುಹೋಗತಕ್ಕವರು. ದೈವ–ಮಾನುಷ ಸಂಬಂಧವೇ ಹೀಗೆ. ಊರ್ವಶಿ ಅಮರ್ತ್ಯೆ, ಪುರೂರವನು ಮರ್ತ್ಯ. ಇವರಿಬ್ಬರಿಗೂ ನಿರಂತರವಾದ ಸಂಘಟನೆ ಹೇಗಾದೀತು ? ಋಗ್ವೇದದಂತೆ ಊರ್ವಶಿಯೇ ಚಂಚಲತೆಯಿಂದ ಪುರೂರವನನ್ನು ಕೈಬಿಟ್ಟ ಮಾತಿರಲಿ ; ಶತಪಥಬ್ರಾಹ್ಮಣ ವಿಷ್ಣುಪುರಾಣಗಳಂತೆ ಅವಳಿಗೆ ಆತನಲ್ಲಿ ಆದರವಿದ್ದರೂ ಕೂಡ ಪುರೂರವನು ಗಂಧರ್ವ ದೇಹವನ್ನು ಪಡೆದ ಹೊರತು ಇಬ್ಬರ ಸಮಾಗಮವೂ ನಿತ್ಯವಾಗುವಂತಿಲ್ಲ. ಏಕೆಂದರೆ, ಮರ್ತ್ಯನು ಮರ್ತ್ಯನಾಗಿರುವವರಿಗೂ ಅಮರ್ತ್ಯಭೋಗವು ಅವನ ಅರ್ಹತೆಗೆ ಮೀರಿದ್ದು. ಮಾನುಷನು ಅಮಾನುಷರೊಡನೆ ಶಾಶ್ವತಸಂಬಂಧವನ್ನು ಬಯಸಿದರೆ, ತನ್ನ ನಿಲವಿಗೆ ಮೀರಿದ ಹಣ್ಣಿಗೆ ಕೈನೀಡಿದರೆ, ಅದು ವಿಫಲಮನೋರಥದಲ್ಲಿ ಮುಗಿಯುವುದೇ ಖಂಡಿತ. ಮರ್ತ್ಯನ ಆಸೆ ಎಷ್ಟೆಷ್ಟು ಗಾಢವೋ ಅನನ್ಯವೋ ಅದರ ಪರಿಣಾಮವು ಅಷ್ಟಷ್ಟು ಘೋರವೂ ದುರಂತವೂ ಆಗುತ್ತದೆ. ಊರ್ವಶಿಯ ಸಂಬಂಧದಿಂದ ಪುರೂರವನು ಪಟ್ಟ ಪಾಡು ಎಷ್ಟು ! ಅವಳನ್ನು ಕಳೆದುಕೊಂಡ ಬಳಿಕ ಅವನ ಶೌರ್ಯವು ಮತ್ತೆ ಬೆಳಗಲಿಲ್ಲ, ಯುದ್ಧದಲ್ಲಿ ಅವನ ಗರ್ಜನೆ ಮತ್ತೆ ಕೇಳಿಸಲಿಲ್ಲ, ಬತ್ತಳಿಕೆಯಿಂದ ಅವನ ಬಾಣವು ಮತ್ತೆ ಹೊರಬೀಳಲಿಲ್ಲ. ದಸ್ಯುಸಂಹಾರಕ್ಕಾಗಿ ಅವನು ಜನ್ಮವೆತ್ತಿದ್ದವನು. ಈಗ ಊರ್ವಶಿಯ ಹುಚ್ಚು ಹಿಡಿದು ಅವನ ಸತ್ತ್ವವು ಉಡುಗಿಹೋಗುತ್ತದೆ, ಘನತೆ ಬಯಲಾಗುತ್ತದೆ; ಆತ್ಮಹತ್ಯದ ಕಡೆಗೆ ಕೂಡ ಅವನು ಮನಸ್ಸು ತಿರುಗಿಸುತ್ತಾನೆ. ಅಲಭ್ಯವಸ್ತು ಪ್ರಣಯದ ದುರಂತ ಪರಿಣಾಮವನ್ನು ಸೂಚಿಸುವುದೇ ಊರ್ವಶೀ ಪುರೂರವರ ಕಥೆಯ ಸಾರ.

ವಿಕ್ರಮೋರ್ವಶೀಯ ನಾಟಕವು ನಮ್ಮನ್ನು ಬೇರೊಂದು ಪ್ರಪಂಚಕ್ಕೆ ಒಯ್ಯುತ್ತದೆ. ಉರ್ವಶೀಪುರೂರವರ ಪ್ರಥಮ ಸಮಾಗಮವನ್ನು ಕಾಳಿದಾಸನು ತುಂಬ ಜಾಣ್ಮೆಯಿಂದ ಸಂಘಟಿಸಿದ್ದಾನೆ. ಇಲ್ಲಿ ಪುರೂರವನ ರಥಕ್ಕೆ ಸ್ವರ್ಗಗಮನ ಶಕ್ತಿಯುಂಟು. ಒಂದು ದಿನ ಅವನು ಸೂರ್ಯೋಪಸ್ಥಾನವನ್ನು ಮುಗಿಸಿಕೊಂಡು ಭೂಮಿಗೆ ಇಳಿಯುತ್ತಿರುವಾಗ ಅಪ್ಸರೆಯರ ಆಕ್ರಂದನ ಕಿವಿಗೆ ಬೀಳುತ್ತದೆ. ದೇವೇಂದ್ರನ ಸುಕುಮಾರಶಸ್ತ್ರವೆನಿಸಿದ ಉರ್ವಶಿಯನ್ನೂ ಅವಳ ಸಖಿಯಾದ ಚಿತ್ರಲೇಖೆಯನ್ನೂ ಮಾರ್ಗಮಧ್ಯದಲ್ಲಿ ಕೇಶಿಯೆಂಬ ದಾನವನು ಅಪಹರಿಸಿಕೊಂಡು ಹೋದನೆಂದು ಅಪ್ಸರೆಯರಿಂದ ತಿಳಿದು ಇಂದ್ರಪಕ್ಷಪಾತಿಯಾದ ಪುರೂರವನು ಒಡನೆಯೇ ದಾನವನ ಬೆನ್ನಟ್ಟಿ ಹೋಗಿ ಅವನನ್ನು ನಿಗ್ರಹಿಸುತ್ತಾನೆ. ಬಂದಿಗಳಾಗಿದ್ದ ಇಬ್ಬರನ್ನೂ ತನ್ನ ರಥದಲ್ಲಿ ಕುಳ್ಳಿರಿಸಿಕೊಂಡು ಹಿಂದಿರುಗುತ್ತಿರುವಾಗ ದಾರಿಯಲ್ಲಿ ಉರ್ವಶಿ ಮೂರ್ಛೆಯಿಂದ ಎಚ್ಚತ್ತು ತನ್ನ ರಕ್ಷಕನಾದ ಪುರೂರವನನ್ನು ನೋಡಿ "ದಾನವರಿಂದ ಉಪಕಾರವೇ ಆಯಿತು" ಎಂದುಕೊಳ್ಳುತ್ತಾಳೆ. ಇತ್ತ ಪುರೂರವನ ಮನಸ್ಸೂ ಅವಳ ರೂಪದಲ್ಲಿ ಸೆರೆಸಿಕ್ಕುತ್ತದೆ. ಬಳಿಕ ಉರ್ವಶಿ ತನ್ನ ಸಖಿಯರೆಲ್ಲರೊಡನೆ ಸೇರಿ ಇಂದ್ರಲೋಕಕ್ಕೆ ಹೊರಡಬೇಕಾಗುತ್ತದೆ. ಹೊರಡುವಾಗ ಅವಳು "ಬಳ್ಳಿಯ ಕವಲಿನಲ್ಲಿ ನನ್ನ ಏಕಾವಳೀ ಹಾರವು ಸಿಕ್ಕಿಕೊಂಡಿತು" ಎಂದು ನಟಿಸಿ ನಿಂತು ಪುರೂರವನನ್ನೇ ನೋಡಿಕೊಂಡು ಹೋಗುತ್ತಾಳೆ; ತನ್ನ ಜೊತೆಯಲ್ಲಿ ಅವನ ಮನಸ್ಸನ್ನೂ ಮೃಣಾಲತಂತುವಿನಂತೆ ಎಳೆದುಕೊಂಡು ಹೋಗುತ್ತಾಳೆ.

ಉರ್ವಶಿ ಗಣಿಕೆ, "ಸಾಧಾರಣ" ಸ್ತ್ರೀ. ಅವಳಿಗೂ ಪುರೂರವನಿಗೂ ಪರಸ್ಪರಾನುರಾಗವು ಜನಿಸಿದ ಮೇಲೆ ಅವರಿಬ್ಬರ ಸಂಸರ್ಗಕ್ಕೆ ಅಡ್ಡಿ ಇರಲಾರದು. ವೈದಿಕ ಕಥೆಯಲ್ಲಿ ಅಂಥ ಅಡ್ಡಿಯೂ ಇಲ್ಲ. ಆದರೆ ಕಾಳಿದಾಸನು ಇಷ್ಟು ಸುಲಭವಾಗಿ ಅವರನ್ನು ಒಂದುಗೂಡಿಸುವುದಿಲ್ಲ. ಈಗ ಪುರೂರವನ ಅಂತಃಪುರಕ್ಕೆ ನಮ್ಮನ್ನು ಒಯ್ಯುತ್ತಾನೆ. ಅಲ್ಲಿ ಅರಸನ ಪಟ್ಟಮಹಿಷಿಯಾದ ಕಾಶೀರಾಜಪುತ್ರಿಗೆ ಆಗಲೆ ಸಂಶಯವು ಮೂಡಿದೆ. ನಿಪುಣಿಕೆಯೆಂಬ ಅನ್ವರ್ಥನಾಮವುಳ್ಳ ತನ್ನ ಚೇಟಿಯ ಮೂಲಕ ಪುರೂರವನ ಪ್ರಣಯ ರಹಸ್ಯವನ್ನು ವಿದೂಷಕನಿಂದ ಹೊರಡಿಸಿರುತ್ತಾಳೆ. ಇತ್ತ ಪ್ರಮದವನದಲ್ಲಿ ಪುರೂರವನು ಈ ಒಡಕು ಬಾಯಿಯ ವಿದೂಷಕನೊಂದಿಗೇ ತನ್ನ ವಿರಹತಾಪವನ್ನು ಹೇಳಿಕೊಳ್ಳುತ್ತಿರುವಾಗ

ಊರ್ವಶಿಯೂ ಮದನಚೋದಿತಳಾಗಿ ಅವನನ್ನೇ ಹುಡುಕಿಕೊಂಡು ಚಿತ್ರಲೇಖೆ ಯೊಡನೆ ಬರುತ್ತಾಳೆ. ತಿರಸ್ಕರಿಣೀ ವಿದ್ಯೆಯ ಬಲದಿಂದ ಅದೃಶ್ಯಳಾಗಿ ನಿಂತು ಇವರ ರಹಸ್ಯಸಲ್ಲಾಪವನ್ನು ಕೇಳಿ ಪುರೂರವನ ಮನಸ್ಸು ತನ್ನಲ್ಲೇ ನಟ್ಟಿರುವು ದೆಂದು ದೃಢಮಾಡಿಕೊಂಡು ತನ್ನ ಪ್ರಣಯಸಂತಾಪವನ್ನು ಸೂಚಿಸುವ ಪದ್ಯ ವನ್ನು ಒಂದು ಭೂರ್ಜಪತ್ರದ ಮೇಲೆ ಬರೆದು ಅವನ ಬಳಿ ಹಾಕುತ್ತಾಳೆ. ಅದನ್ನು ಓದಿಕೊಂಡು ಅವನು ಹರ್ಷಪಡುತ್ತಿರುವಾಗ ತಾನೂ ಎದುರಿಗೆ ಕಾಣಿಸಿಕೊಳ್ಳು ತ್ತಾಳೆ. ಆದರೆ ಒಂದು ಕ್ಷಣಕಾಲ ಪ್ರಿಯನ ಬಳಿ ಕುಳಿತುಕೊಂಡು ತಮ್ಮಿಬ್ಬರ ವಿರಹವೇದನೆಯನ್ನು ತಗ್ಗಿಸಿಕೊಳ್ಳುವುದಕ್ಕೂ ಊರ್ವಶಿಗೆ ಅವಕಾಶ ದೊರೆಯುವು ದಿಲ್ಲ. ಸ್ವರ್ಗದಲ್ಲಿ ಭರತಮುನಿ ಲಕ್ಷ್ಮೀಸ್ವಯಂವರವೆಂಬ ನಾಟಕದ ಅಭಿನಯಕ್ಕೆ ಏರ್ಪಾಡು ಮಾಡಿರುತ್ತಾನೆ; ಅದರಲ್ಲಿ ಪಾತ್ರವಹಿಸಲು ಊರ್ವಶಿ ಬರಬೇಕೆಂದು ಆ ಒಡನೆಯೇ ಒಂದು ಕರೆ ಕೇಳಿಸುತ್ತದೆ. ನಲ್ಲನಲ್ಲೆಯರು ವಿಷಾದದಿಂದ ಅಗಲ ಬೇಕಾಗುತ್ತದೆ. ಇನ್ನು ಪುರೂರವನು ಊರ್ವಶಿಯ ಪತ್ರವನ್ನಾದರೂ ನೋಡುತ್ತಾ ಕಾಲಕಳೆಯಬೇಕೆಂದಿದ್ದರೆ, ಅದು ವಿದೂಷಕನ ಅಚಾತುರ್ಯದಿಂದ ಎಲ್ಲೋ ಹಾರಿ ಹೋಗಿರುತ್ತದೆ. ಅಷ್ಟೇ ಅಲ್ಲ. ಈ ಮಿತ್ರರಿಬ್ಬರ ರಹಸ್ಯಾಲಾಪವನ್ನು ಆಲಿಸಲು ಬರುತ್ತಿದ್ದ ಪಟ್ಟಮಹಿಷಿಯ ಕೈಗೆ ಅದು ಸಿಕ್ಕಿ ತುಂಬ ಅನರ್ಥಕ್ಕೆ ಕಾರಣವಾಗು ತ್ತದೆ. ಅರಸನು ಈಗ ಒಡವೆ ಸಹಿತ ಸಿಕ್ಕಿಬಿದ್ದ ಕಳ್ಳನಂತಾಗುತ್ತಾನೆ. ರಾಣಿ ಅವನ ಸಂಗಡ ಈರ್ಷ್ಯಾಕಲಹವನ್ನೆಸಗಿ, ಅವನು ಪಾದಕ್ಕೆ ಬಿದ್ದರೂ ಪ್ರಸನ್ನ ಳಾಗದೆ, ಕೋಪದಿಂದ ಹೊರಟುಹೋಗುತ್ತಾಳೆ.

ಆದರೆ, ಊರ್ವಶಿಯ ಪರಾಧೀನತೆಯೂ ಪ್ರಥಮ ಪತ್ನಿಯ ಈರ್ಷ್ಯೆಯೂ ಚಿರ ವಿಘ್ನಗಳಲ್ಲ. ಹೇಗೆ ಬಂದುವೋ ಹಾಗೆಯೇ ನಿವಾರಣೆಯಾಗುತ್ತವೆ. ಹಿಂದೆ ಹೇಳಿದ ನಾಟಕಾಭಿನಯ ಕಾಲದಲ್ಲಿ, ಲಕ್ಷ್ಮಿಯ ಪಾತ್ರವನ್ನು ವಹಿಸಿದ್ದ ಊರ್ವಶಿ ಪುರುಷೋತ್ತಮನಲ್ಲಿ ತನ್ನ ಮನಸ್ಸು ನಟ್ಟಿದೆಯೆಂದು ಹೇಳುವ ಬದಲು ವ್ಯಗ್ರತೆ ಯಿಂದ "ಪುರೂರವನಲ್ಲಿ" ಎಂದು ಬಿಡುವಳು. ಇದರಿಂದ ಭರತಮುನಿಗೆ ಕೋಪ ಬಂದು ಅವಳಿಗೆ ಸ್ವರ್ಗಚ್ಯುತಿಯಾಗುವಂತೆ ಶಾಪಕೊಡುವನು. ಆಗ ಇಂದ್ರನು ತನಗೆ ಪುರೂರವನು ರಣಸಹಾಯನೆಂಬುದನ್ನು ಸ್ಮರಿಸಿಕೊಂಡು ಊರ್ವಶಿಯಲ್ಲಿ ಕರುಣಿಸಿ, "ನಿನ್ನಲ್ಲಿ ಪುರೂರವನು ಸಂತಾನವನ್ನು ಕಾಣುವವರೆಗೂ ಅವನ ಸಂಗಡ ಇರು" ಎಂದು ಅನುಗ್ರಹಿಸುವನು. ಹೀಗೆ ಭರತಶಾಪವೇ ಊರ್ವಶಿಯ

ಪರಾಧೀನತೆಯನ್ನು ತಪ್ಪಿಸಲು ಸಹಾಯಮಾಡುತ್ತದೆ.[4] ಇತ್ತ ಪುರೂರವನ ರಾಣಿಯ ಕಾಟವೂ ತನಗೆ ತಾನೇ ತಪ್ಪುತ್ತದೆ. ತನ್ನ ಗಂಡನು ಇನ್ನು ತನಗೆ ದಕ್ಕಲಾರನೆಂದು ಆಕೆ ತಿಳಿದು, "ಕೈಮೀರಿದ್ದಕ್ಕೆ ಕೃಷ್ಣಾರ್ಪಣ" ಎನ್ನುವಂತೆ ಒಂದು ದಿನ ಪ್ರಿಯಪ್ರಸಾದನವೆಂಬ ವ್ರತದ ನೆವದಲ್ಲಿ, ಅವನ ಬಯಕೆಯ ರಮಣಿಗೆ ಅವನನ್ನು ದಾನಮಾಡಿಬಿಡುತ್ತಾಳೆ. ಇಷ್ಟರೊಳಗೆ ಸ್ವರ್ಗ ತಪ್ಪಿದ ಉರ್ವಶಿಯೂ ಪುರೂರವನೊಂದಿಗೇ ಇರಲು ಬಂದು ಮರೆಯಲ್ಲಿ ನಿಂತು ಎಲ್ಲವನ್ನೂ ಕೇಳಿರುತ್ತಾಳೆ. ಸರಿ. ಇಬ್ಬರ ಅಭೀಷ್ಟವೂ ಕೈಗೂಡಿತು. ಪುರೂರವನು ನಿರಂತರವಿಹಾರದಲ್ಲಿ ನಿರತನಾಗುತ್ತಾನೆ.

ಇಷ್ಟೆಲ್ಲ ನಡೆಯುವ ವೇಳೆಗೆ ನಾಟಕದಲ್ಲಿ ಮೂರು ಅಂಕಗಳು ಸಾಗಿವೆ. ಇವರ ದಾಂಪತ್ಯ ಸೌಖ್ಯಕ್ಕೆ ಈಗ ಬೇರೆ ಅಡಚಣೆಗಳು ಒದಗುತ್ತವೆ. ಗಂಧಮಾದನಪರ್ವತದಲ್ಲಿ ಇಬ್ಬರೂ ವಿಹರಿಸುತ್ತಿದ್ದಾಗ ಪುರೂರವನು ಒಬ್ಬ ವಿದ್ಯಾಧರ ಕನ್ಯೆಯನ್ನು ದಿಟ್ಟಿಸಿ ನೋಡಿದನೆಂಬ ಅಲ್ಪಕಾರಣದಿಂದಲೇ ಉರ್ವಶಿ ಈರ್ಷ್ಯೆಗೊಂಡು ಯಾವ ಅನುನಯಕ್ಕೂ ಪ್ರಸನ್ನಳಾಗದೆ ಅವನನ್ನು ಬಿಟ್ಟುಹೋಗುತ್ತಾಳೆ. ಕೋಪಾವೇಶದಲ್ಲಿ ಅರಿವಿಲ್ಲದೆ ಕುಮಾರಸ್ವಾಮಿಯ ವನವನ್ನು ಪ್ರವೇಶಿಸಿ ಅಲ್ಲಿಯ ಶಾಪ ಮಹಿಮೆಯಿಂದ ಒಂದು ಲತೆಯಾಗಿ ಪರಿಣಮಿಸುತ್ತಾಳೆ. ಇತ್ತ ಪುರೂರವನು ಅವಳ ಅಗಲಿಕೆಯಿಂದ ಉನ್ಮಾದಹೊಂದಿ ಎಲ್ಲೆಲ್ಲೂ ಹುಡುಕುತ್ತಾ, ದಾರಿಯಲ್ಲಿ ಕಂಡ ಮೃಗಪಕ್ಷಿ ಪರ್ವತಗಳನ್ನೆಲ್ಲಾ "ಉರ್ವಶಿಯನ್ನು ನೀವು ಕಂಡಿರಾ, ನೀವು ಕಂಡಿರಾ?" ಎಂದು ಕೇಳುತ್ತಾ ಅಲೆಯುತ್ತಿರುತ್ತಾನೆ. (ಅವನ ವಿಲಾಪವು ನಾಲ್ಕನೆಯ ಅಂಕವನ್ನೇ ಹೆಚ್ಚು ಕಡಮೆ ತುಂಬಿ ಒಂದು ಅತ್ಯುತ್ತಮ

---

4 ಈ ಸಂಗತಿಯನ್ನೆಲ್ಲಾ ಒಂದು ವಿಷ್ಕಂಭದಲ್ಲಿ ಭರತಶಿಷ್ಯರಿಬ್ಬರ ಸಂವಾದವನ್ನು ಕೇಳಿ ತಿಳಿದುಕೊಳ್ಳುತ್ತೇವೆ. ಕಾಳಿದಾಸನು ಇದನ್ನೇ ಅಂತರ್ನಾಟಕವಾಗಿ—"ಗರ್ಭಾಂಕ"ವಾಗಿ—ರಚಿಸಿ ನಮ್ಮ ಕಣ್ಣಮುಂದೆ ನಡಸಿದ್ದರೆ ನಾಟಕದ ಸ್ವಾರಸ್ಯವು ಇನ್ನಷ್ಟು ಹೆಚ್ಚುತ್ತಿತ್ತು. (ಗರ್ಭಾಂಕದ ಪ್ರಯೋಜನವನ್ನು ಈಚೆಗೆ ಬಂದ ಶ್ರೀಹರ್ಷ ಭವಭೂತಿಗಳು ತಿಳಿದಿದ್ದರು.) ಹಾಗೆಯೇ ಮುಂದೆ ಬರುವ ಉರ್ವಶೀ-ಪುರೂರವರ ಈರ್ಷ್ಯಾಕಲಹದ ವೃತ್ತಾಂತವು ಚತುರ್ಥಾಂಕದ ಆದಿಯ ಪ್ರವೇಶಕದಲ್ಲಿ ಒಂದು ವರದಿಯ ರೂಪವಾಗಿ ಬರುವುದಕ್ಕಿಂತ ಸ್ವತಂತ್ರ ದೃಶ್ಯವಾಗಿಯೇ ಬಂದಿದ್ದರೆ ಸ್ವಾರಸ್ಯ ಇನ್ನೂ ಹೆಚ್ಚುತ್ತಿತ್ತು.

ಕಾವ್ಯವಾಗಿದೆ.) ಕೊನೆಯಲ್ಲಿ ಅವನಿಗೆ ಸಂಗಮನೀಯವೆಂಬ ಮಣಿ ದೊರೆಯುತ್ತದೆ. ಋಷಿಯೊಬ್ಬನಿಂದ ಅದರ ಪ್ರಭಾವವನ್ನರಿತು ತೆಗೆದುಕೊಂಡು ಮುಂದೆ ಹೋಗುತ್ತಿರುವಾಗ ಪುರೂರವನು ಒಂದು ಲತೆಯನ್ನು ಕಾಣುತ್ತಾನೆ. ಅದರ ದರ್ಶನದಿಂದ ಉರ್ವಶಿಯ ನೆನಪು ಬಂದು ಅವನು ಭಾವಪರವಶನಾಗಿ ಅದನ್ನೇ ಅಪ್ಪಿಕೊಳ್ಳುತ್ತಾನೆ. ಆ ಲತೆಯೇ ಉರ್ವಶಿ. ಮಣಿಪ್ರಭಾವದಿಂದ ಶಾಪವಿಮೋಚನೆಯಾಗಿ ಅವಳು ಸ್ವಸ್ವರೂಪವನ್ನು ಪಡೆಯುತ್ತಾಳೆ. ಹಿಂದಿನ ಕ್ಲೇಶಗಳನ್ನು ಮರೆತು ಇಬ್ಬರೂ ರಾಜಧಾನಿಗೆ ಹಿಂದಿರುಗುತ್ತಾರೆ.

ಕೆಲವು ವರ್ಷಗಳು ಕಳೆಯುತ್ತವೆ. ಈಗ ಪುರೂರವನಿಗೆ ಮಕ್ಕಳಿಲ್ಲವೆಂಬುದು ಹೊರತು ಬೇರೆ ಯಾವ ಚಿಂತೆಯೂ ಇಲ್ಲ. ಒಂದು ದಿನ ಸಂಗಮನೀಯ ಮಣಿಯನ್ನು ಒಂದು ಹದ್ದು ಹಾರಿಸಿಕೊಂಡು ಹೋಗುತ್ತದೆ. ಅದು ಪುರೂರವನ ಬಾಣಪಥವನ್ನು ಮೀರಿದರೂ ದೂರದ ಆಶ್ರಮದಲ್ಲಿದ್ದ ಕ್ಷತ್ರಿಯ ಕುಮಾರನೊಬ್ಬನ ಗುರಿಗೆ ಸಿಕ್ಕಿ ಅವನ ಬಾಣಕ್ಕೆ ಬಲಿಯಾಗಿ ಬೀಳುತ್ತದೆ. ಈ ಕುಮಾರನೇ ಆಯುಸ್ಸು—ಪುರೂರವನಿಗೆ ಉರ್ವಶಿಯಲ್ಲಿ ಹಿಂದೆಯೇ ಜನಿಸಿದ್ದ ಪುತ್ರ. ಪುರೂರವನು ಯಾವುದೋ ಒಂದು ಯಾಗಕ್ಕೆ ಹೋಗಿದ್ದಾಗ ಉರ್ವಶಿ ಈ ಮಗನನ್ನು ಪ್ರಸವಿಸಿ ತಂದೆಯ ಕಣ್ಣಿಗೆ ಬೀಳದಿರುವಂತೆ ಇದುವರೆಗೂ ಚ್ಯವನಾಶ್ರಮದಲ್ಲಿ ಬಿಟ್ಟಿದ್ದಳು. ತನ್ನ ದಿವ್ಯಪ್ರಭಾವದಿಂದ ಗಂಡನಿಗೆ ಇದೊಂದೂ ಗೊತ್ತಾಗದ ಹಾಗೆ ನಡಸಿದ್ದಳು. ಈಗ ಹಕ್ಕಿಯನ್ನು ಹೊಡೆದು ಆಶ್ರಮನಿಯಮವನ್ನುಲ್ಲಂಘಿಸಿದನೆಂದು ಚ್ಯವನರು ಈ ಕ್ಷತ್ರಿಯಕುಮಾರನನ್ನು ತಾಯಿಯಬಳಿಗೇ ಕಳಿಸಿದ್ದರಿಂದ ಅವನು ತನ್ನ ತಂದೆಯ ಕಣ್ಣೆದುರಿಗೆ ಮೊದಲ ಸಲ ನಿಲ್ಲುತ್ತಾನೆ. ಅನಿರೀಕ್ಷಿತವಾದರೂಅಪೇಕ್ಷಿತವಾದ ಪುತ್ರಲಾಭದಿಂದ ಪುರೂರವನು ಹಿಗ್ಗುತ್ತಿರುವಾಗ ಉರ್ವಶಿ ಬಂದು ಇಂದ್ರನ ಕಟ್ಟಳೆಯನ್ನು ಜ್ಞಾಪಿಸುತ್ತಾಳೆ. "ಮುಂಗಾರು ಮಳೆ ಬಂದು ವೃಕ್ಷದ ಬೇಗೆ ಹಿಂಗಿದ ಸಮಯದಲ್ಲೇ ಅದಕ್ಕೆ ಸಿಡಿಲು ಬಡಿದಂತಾಯಿತು." ಪುರೂರವನಿಗೆ ಪುತ್ರಸಮಾಗಮ ಕಾಲದಲ್ಲೇ ಪತ್ನೀವಿಶ್ಲೇಷವೊದಗಿತು. ಪರಮ ದುಃಖದಿಂದ ಉರ್ವಶಿ ಬೀಳ್ಕೊಳ್ಳುತ್ತಿರುತ್ತಾಳೆ, ಅತಿಶಯ ನಿರ್ವೇದದಿಂದ ಪುರೂರವನೂ ತಪೋವನದ ಕಡೆ ತಿರುಗುತ್ತಿರುತ್ತಾನೆ. ಈ ಪ್ರಣಯಿಗಳಿಗೆ ಇದೇ ಅತ್ಯಂತ ವಿಚ್ಛೇದವಾಗಿ ಪರಿಣಮಿಸಬೇಕು. ಆದರೆ ಹೊತ್ತಿಗೆ ಸರಿಯಾಗಿ ದೇವೇಂದ್ರನಿಗೆ ಮುಂದೊದಗಲಿರುವ ಸುರಾಸುರ ಸಂಗ್ರಾಮದ ನೆನಪು ಬಂದಿತು.

ಆಗ ತನ್ನ ಬಲಭುಜವಾದ ಪುರೂರವನ ಸಹಾಯವಿಲ್ಲದಿದ್ದರೆ ಹೇಗೆ? ರಾಜಕಾರಣಪಟುವಾದ ಇಂದ್ರನು ಒಡನೆಯೇ ನಾರದನನ್ನು ಇವರ ಬಳಿಗೆ ಕಳಿಸಿಕೊಟ್ಟನು. "ಶಸ್ತ್ರಸಂನ್ಯಾಸ ಬೇಡ; ನಿನಗೆ ಯಾವಜ್ಜೀವವೂ ಉರ್ವಶಿ ಸಹಧರ್ಮಚಾರಿಣಿಯಾಗಿರಲಿ" ಎಂಬ ಇಂದ್ರನ ಅಪ್ಪಣೆಯನ್ನು ನಾರದನು ತಿಳಿಸಿದ ಬಳಿಕ ನಲ್ಲನಲ್ಲೆಯರ ಆನಂದ ಸಂಭ್ರಮದಲ್ಲಿ, ಆಯುಃಕುಮಾರನ ಯೌವರಾಜ್ಯಾಭಿಷೇಕ ಮಂಗಳದಲ್ಲಿ ವಿಕ್ರಮೋರ್ವಶೀಯವು ಮುಗಿಯುತ್ತದೆ.

ವೈದಿಕಯುಗದಿಂದ ಈ ನಾಟಕದ ಬಳಿಗೆ ಎಷ್ಟು ದೂರ ಸಾಗಿಬಂದಿದ್ದೇವೆ! ಇಲ್ಲಿಯ ಕಥೆಯೇ ಬೇರೆ, ಆವರಣವೇ ಬೇರೆ, ಉರ್ವಶಿಯೇ ಬೇರೆ. ವೈದಿಕ ಕಥೆಯಲ್ಲಿ ಉರ್ವಶಿ ತನ್ನ ಒಂದು ಲೀಲೆಗಾಗಿ, ಕ್ರೀಡೆಗಾಗಿ ಪುರೂರವನನ್ನು ಕಾಮಿಸಿದಳು: ಸಮಯಬಂಧಪೂರ್ವಕವಾಗಿ ಅವನೊಡನೆ ನಿಂತಳು. ಅದು ಮುರಿದ ಕೂಡಲೆ ತನ್ನ ಪ್ರಣಯವನ್ನೂ ಮುರಿದಳು. (ಮತ್ತೆ ಅವಳನ್ನು ಪಡೆಯಲು ಪುರೂರವನು ದೇಹಾಂತರವನ್ನೇ ಪಡೆಯಬೇಕಾಯಿತು.) ತನ್ನ ನಾಟಕದಲ್ಲಿ ಕಾಳಿದಾಸನು ಈ ಕಟ್ಟಡವನ್ನೇ ವ್ಯತ್ಯಾಸಪಡಿಸಿದ್ದಾನೆ. ಇಲ್ಲಿ ನಾಯಕನಾಯಿಕೆಯರ ವಿಯೋಗಸಂಯೋಗಗಳ ಸ್ವರೂಪವೇ ತುಂಬ ಭಿನ್ನವಾಗಿದೆ. ಮೊದಲು ಅಂತಃಪುರದಸಾಮಾನ್ಯಕಲಹವೊಂದು ಅವರಿಬ್ಬರ ಸಮಾಗಮವನ್ನುಕೆಲಮಟ್ಟಿಗೆ ಬೆದರಿಸುತ್ತದೆ. ಮೂಲಕಥೆಗಳಲ್ಲಿ ಪುರೂರವನಿಗೆ ಹಿರಿಯ ಹೆಂಡತಿಯಿದ್ದಳೆಂಬ ಪ್ರಸ್ತಾವ ಬಂದಿಲ್ಲ. ಅದು ಬರತಕ್ಕದ್ದೂ ಅನುಚಿತ. ಏಕೆಂದರೆ, ಅದರಿಂದ ಕಥೆಯ ಘನತೆಯೂ ನಾಯಕನ ಘನತೆಯೂ ತಗ್ಗುತ್ತವೆ. ಇದನ್ನು ಲಕ್ಷಿಸದೆ ಕಾಳಿದಾಸನು, ಬಹುಶಃ ನಾಟಕದ ಸಂಪ್ರದಾಯವನ್ನು ಅನುಸರಿಸಿ, ಕಾಶೀರಾಜಪುತ್ರಿಯ ವೃತ್ತಾಂತವನ್ನು ಬೆಳೆಸಿದ್ದಾನೆ. ಪುರೂರವನು ಗಣಿಕೆಯೊಬ್ಬಳ ವ್ಯಾಮೋಹೋನ್ಮಾದದಲ್ಲಿ ತನ್ನ ಗೃಹಸ್ಥಧರ್ಮಕ್ಕೆಲ್ಲಾ ತಿಲಾಂಜಲಿಕೊಟ್ಟನೆಂಬ ಭಾವವಾದರೂ ಇಲ್ಲಿ ಪರಿಸ್ಫುಟವಾಗಿದ್ದರೆ ಚೆನ್ನಾಗಿತ್ತು. ಆದರೆ ಕಾಳಿದಾಸನಿಗೆ ಈ ಪ್ರಯೋಜನವನ್ನು ಸಾಧಿಸುವ ಉದ್ದೇಶವೂ ಹೆಚ್ಚಾಗಿದ್ದಂತೆ ಕಾಣುವುದಿಲ್ಲ; ನಾಯಕನ ಧೀರೋದಾತ್ತತೆಯೂ ದಾಕ್ಷಿಣ್ಯಧರ್ಮವೂ ಇದಕ್ಕೆ ಅಡ್ಡಿಯಾಯಿತೇನೊ. ಹೋಗಲಿ; ಕಟ್ಟಿದ ಗಂಟನ್ನಾದರೂ ಚಾತುರ್ಯದಿಂದ ಬಿಚ್ಚಿದ್ದಾನೆಂದು ಹೇಳಲು ಸಾಧ್ಯವಿಲ್ಲ. ರಾಣಿಯ ಈರ್ಷ್ಯೆ ಒಮ್ಮಿಂದೊಮ್ಮೆ ಅನುತಾಪಕ್ಕೆ ತಿರುಗುತ್ತದೆ. ಅವಳು ಮಾಡಿದ ಪತಿದಾನವು ಮಹಾಪತಿವ್ರತೆಗೆ

ಮಾತ್ರ ಸಾಧ್ಯವಾದದ್ದು ; ಈ ಕ್ಷತ್ರಿಯ ರಮಣಿಗೆ ಅಷ್ಟು ಉಚಿತವಲ್ಲವೆನ್ನಿಸುತ್ತದೆ. ಇನ್ನು ಮುಂದಿನ ವಿಘ್ನವೇನೆಂದು ನೋಡೋಣ. ಈರ್ಷ್ಯಾಕೋಪದಿಂದ ಕುಮಾರವನವನ್ನು ಪ್ರವೇಶಿಸಿ ಉರ್ವಶಿ ಲತೆಯಾಗಿ ನಿಂತದ್ದೂ, ನಾಯಕನಿಗೆ ಸಂಗಮನೀಯಮಣಿ ಹಠಾತ್ತಾಗಿ ದೊರೆತು ಶಾಪವಿಮೋಚನೆ ಮಾಡಿದ್ದೂ — ಎರಡೂ ಅದ್ಭುತಕಾರ್ಯಗಳು. ಇವುಗಳಿಂದ ಒಂದು ಅಂಕದ ತುಂಬ ಶ್ರೇಷ್ಠವಾದ ಭಾವಗೀತೆ ನಮಗೆ ದೊರೆತದ್ದೇನೋ ದಿಟ. ಆದರೆ ನಾಟಕದ ಕ್ರಿಯೆಗೆ ಹೆಚ್ಚಿನ ಪ್ರಯೋಜನ ಲಭಿಸಲಿಲ್ಲ.[5] ಮೂಲಕಥೆಯಲ್ಲಿ ಪ್ರಧಾನವಾಗಿರುವ ನಾಯಕನ ಉನ್ಮಾದಕ್ಕೆ ಕಾಳಿದಾಸನು ಈ ರೀತಿಯಲ್ಲಿ ಅವಕಾಶವನ್ನು ಕಲ್ಪಿಸಿ ತರಬೇಕಾಯಿತೇನೋ. ಐದನೆಯ ಅಂಕದಲ್ಲಿ ಮತ್ತೊಂದು ವಿಶೇಷವೊದಗಿ ಅನಿರೀಕ್ಷಿತವಾಗಿ ಪರಿಹಾರವಾಗುತ್ತದೆ. ಅದರ ಸ್ವರೂಪವನ್ನು ಆಗಲೆ ಸೂಚಿಸಿದ್ದಾಗಿದೆ; ಪರಿಹಾರದ ವಿಚಾರವಾಗಿ ಎರಡು ಮಾತು ಮುಂದೆ ಬರುತ್ತದೆ.

ಬರಸಿಡಿಲಿನಂತೆ ಎರಗಿ ಮಾನವನ ಸುಖವನ್ನು ಭಸ್ಮಮಾಡುವ ಒಂದು ಮಹಾವಿಯೋಗದ ಸಂಘಟನೆಯನ್ನು ತೆಗೆದುಹಾಕಿ, ಅದರ ಸ್ಥಾನದಲ್ಲಿ ಕಾಳಿದಾಸನು ಹೀಗೆ ಲಕ್ಷಣಶಾಸ್ತ್ರಪ್ರಸಿದ್ಧವಾದ ಅಯೋಗಮಾನ-ಶಾಪ ವಿಪ್ರಲಂಭಗಳೆಂಬ ಹಲವು ವಿರಹಗಳನ್ನೊಡ್ಡುತ್ತಾನೆ ; ಅವುಗಳನ್ನು ಮತ್ತೆ ಮತ್ತೆ ಪರಿಹರಿಸುತ್ತಾನೆ. ಒಂದೇ ನಿಟ್ಟಿನಲ್ಲಿ ಒಂದೇ ಪ್ರವಾಹದಲ್ಲಿ ಧುಮುಕುವ ಜಲಪಾತಕ್ಕೆ ಹಲವು ತಡೆಗಳನ್ನು ಅಲ್ಲಲ್ಲಿ ಕಟ್ಟಿ ಸಣ್ಣ ಸೀಳುಗಳಾಗಿ ಒಡೆದು ಮೆಲ್ಲನೆ ಕೆಳಗಿಳಿಸಿದಂತಾಯಿತು. ಮೊದಲಿನ ಶಕ್ತಿಯೆಲ್ಲಿ, ಘೋಷವೆಲ್ಲಿ, ಭೀಷಣ ವಿಸ್ಮಯವೆಲ್ಲಿ!

ಉರ್ವಶಿಯ ಸ್ವಭಾವವೂ ಇಲ್ಲಿ ತುಂಬ ಪರಿವರ್ತನವನ್ನು ಹೊಂದಿದೆ. ಹಳೆಯ ಕಥೆಗಳಲ್ಲಿ ಅವಳು ಅಮಾನುಷಿ ; ಅವಳ ಹೃದಯವೂ ಅಂಥದೇ. ಹಿಂದೆ ಸೂಚಿಸಿರುವಂತೆ ಪುರೂರವನ ಸಹವಾಸವು-ಅವಳಿಗೆ ಕ್ಷಣಮಾತ್ರದ ಒಂದು ಲೀಲೆ. ವಿಶ್ಲೇಷದ ವ್ಯಥೆಯೆಲ್ಲ, ಭಗ್ನಹೃದಯವೆಲ್ಲ ಆ ಮಾನವನಿಗೇ ಹೊರತು ಈ ಅಮಾನುಷ ಕಾಮಿನಿಗಲ್ಲ. ಮಾನುಷ-ಅಮಾನುಷಿಯರಿಗಿರುವ ಈ ಮನೋಧರ್ಮಭೇದವು ಋಗ್ವೇದದ ಸಂವಾದದಲ್ಲಿ ಪರಿಸ್ಫುಟವಾಗಿದೆ. ವಿಕ್ರಮೋರ್ವಶೀಯದಲ್ಲಿ ಕಾಳಿ

---

[5] ಈ ಸಂಗಮನೀಯಮಣಿಯ ಪ್ರಸಕ್ತಿ ಐದನೆಯ ಅಂಕದಲ್ಲೂ ಬರುತ್ತದೆ. ಅದರ ಮೂಲಕವೇ ತಂದೆಮಕ್ಕಳ ಸಂಗಮವೂ ಘಟಿಸುತ್ತದೆ. ಇಲ್ಲಿ ಅದು ನಿಜವಾಗಿಯೂ ನಾಟಕದ ಕ್ರಿಯೆಗೆ ಸರಿಯಾದ ಅಂಗವಾಗಿದೆ.

ದಾಸನ ಕೈಗೆ ಉರ್ವಶಿ ಸಿಕ್ಕಿ ಮಾನವಪ್ರಕೃತಿಯಾಗಿದ್ದಾಳೆ. ತಿರಸ್ಕರಿಣೀವಿದ್ಯೆ, ಪ್ರಭಾವದರ್ಶನ ಮೊದಲಾದ ಒಂದೆರಡು ಇಂದ್ರಜಾಲಗಳನ್ನು ಬಿಟ್ಟರೆ ಅವಳಲ್ಲಿ ಬೇರೆ ಯಾವ ಅಮಾನುಷತೆಯೂ ಉಳಿದಿಲ್ಲ—ಪ್ರೇಮಕಾತರತೆಯಲ್ಲಿ ಇವನ್ನು ಕೂಡ ಸರಿಯಾಗಿ ಉಪಯೋಗಿಸಲಾರಳು (ಎರಡನೆಯ ಅಂಕದಲ್ಲಿ). ಅವಳಿಗೆ ಪುರೂರವನಲ್ಲಿ ಅತ್ಯಂತ ವ್ಯಾಮೋಹವಿದೆ. ಅವನ ಸಂಗಡ ಕಟ್ಟುಕಟ್ಟಳೆಗಳನ್ನು ಮಾಡಿಕೊಳ್ಳುವುದಿರಲಿ ; ಅವನಿಗೆ ತನ್ನಲ್ಲಿ ಅನುರಾಗವುಂಟೋ ಇಲ್ಲವೋ ಎಂದು ಶಂಕಿಸಿ ತಾನೇ ಅಧೀರಳಾಗುತ್ತಾಳೆ. ಸಾಮಾನ್ಯಮಾನವಿಯಂತೆ ಅವನ ಸಹವಾಸಕ್ಕೆ ಹಂಬಲಿಸುತ್ತಾಳೆ. ಅವನ ವಿಯೋಗಭೀತಿಯಿಂದ ಮಗನನ್ನು ಕೂಡ ತನ್ನ ಬಳಿ ಇಟ್ಟುಕೊಳ್ಳದೆ ಎಲ್ಲೋ ದೂರಕ್ಕೆ ಅಟ್ಟಿಬಿಟ್ಟಿರುತ್ತಾಳೆ. ಕಡೆಯಲ್ಲಿ ಅಗಲಬೇಕಾದ ಸಂದರ್ಭವೊದಗಿದಾಗ ಇವಳ ವ್ಯಥೆ ಹೆಚ್ಚೋ ಪುರೂರವನ ವ್ಯಥೆ ಹೆಚ್ಚೋ ಹೇಳುವುದು ಕಷ್ಟ. ಅವಳ ವರ್ತನೆಯಲ್ಲಿ ದೇವವನಿತೆಯ ಠೀವಿಯಿಲ್ಲ, ದರ್ಪವಿಲ್ಲ.

ವೈದಿಕ ಕಥೆಯಲ್ಲಿರುವಂತೆ ಇಲ್ಲಿಯೂ ಉರ್ವಶಿ ಗಣಿಕೆಯೇನೋ ಹೌದು ; ಆದರೆ ದಿಟ್ಟತನದಿಂದ ತಾನೇ ಪುರೂರವನನ್ನು ಹುಡುಕಿಕೊಂಡು ಮುಂದುವರಿದು ಬರುವಳೆಂಬ ಅಂಶವನ್ನು ಬಿಟ್ಟರೆ ಅವಳಿಗೂ ಕುಲಕನ್ಯೆಯರಿಗೂ ಹೆಚ್ಚಿನ ವ್ಯತ್ಯಾಸವು ಸ್ಫುಟವಾಗುವುದಿಲ್ಲ. ಈ ಪಕ್ಷಕ್ಕೆ ಕಥಾನಾಯಿಕೆ ಒಬ್ಬ ದೇವಗಣಿಕೆ ಯೇಕಾಗಬೇಕು ? ಅದು ಹೋಗಲಿ. ವೇಶ್ಯೆಯರಲ್ಲೂ 'ಮೃಚ್ಛಕಟಿಕ'ದ ವಸಂತಸೇನೆಯಂತೆ ಉದಾತ್ತರಮಣಿಯರಿರಬಹುದು. ಅಂಥವರ ಗುಣಕೀರ್ತನೆಯಿಂದ ಕೃತಿಯ ಭಾವವೇ ಉನ್ನತವಾಗಬಹುದು. ಆದರೆ ಉರ್ವಶಿಯಲ್ಲಿ ಈ ಬಗೆಯ ಸತ್ತ್ವವಿಶೇಷ ಕಾಣಬರುವುದಿಲ್ಲ. ಹಾಗೆ ನೋಡಿದರೆ, ಪುರೂರವನಲ್ಲಿ ಅನನ್ಯವಾದ ಆಸಕ್ತಿಯುಂಟೆಂಬುದೊಂದೇ ಅವಳ ಗುಣ. ಮಿಕ್ಕ ಸಂಗತಿಗಳಲ್ಲಿ ಅವಳ ಅಸಹನೆಯನ್ನೂ ಸ್ವಾರ್ಥಶೀಲತೆಯನ್ನೂ ನೋಡಿ ನಮಗೆ ಅಷ್ಟೇನೂ ಗೌರವ ಹುಟ್ಟುವುದಿಲ್ಲ.

ಮೇಲಿನ ವಿವೇಚನೆಯಿಂದ ಒಂದೆರಡು ಅಂಶಗಳು ವ್ಯಕ್ತವಾಗಿರಬಹುದು. ಮೂಲತಃ ಉರ್ವಶೀ–ಪುರೂರವರ ಪ್ರಣಯಕಥೆ ದುರಂತ ಕಥೆ. ಆದರ ಆಳದಲ್ಲಿ ಭೀಷಣವಾದ—ಆದರೂ ನಿತ್ಯವಾದ—ತತ್ತ್ವವೊಂದಿದೆ : ಮಾನವನಿಗೆ ದೇವತೆಗಳ ಕೂಟವು ಬೆಂಕಿಯ ಸಂಗಡದ ಸರಸದಂತೆ ; ಅದರಲ್ಲೂ ಗಣಿಕೆಯ ಸ್ನೇಹವು

ಜಲಲಿಪಿಯಂತೆ. ಪುರೂರವನ ಪೂರ್ವದ ಉನ್ನತಿಯನ್ನೂ ಈಗಿನ ದುರ್ಗತಿಯನ್ನೂ ನೋಡಿ ನಾವು ಮರುಗಿ ತಲ್ಲಣಿಸುತ್ತೇವೆ. ಆದರೆ ಹಾಗೆ ನಡೆದದ್ದು ಹೀಗೆ ಮುಗಿಯಬೇಕು. ಈ ಹಳೆಯ ಕಥೆಯ ತಿರುಳಿಗೂ ಭಾವೋತ್ಕರ್ಷಕ್ಕೂ ಲೋಪಬಾರದಂತೆ ಕಾಳಿದಾಸನು ನೋಡಿಕೊಳ್ಳಬೇಕಾಗಿತ್ತು. ಆದರೆ ಅವನ ಗಮನ ಇತ್ತಕಡೆ ಹರಿಯಲಿಲ್ಲವೆಂದು ವಿಧಿಯಿಲ್ಲದೆ ಹೇಳಬೇಕಾಗಿದೆ. ಮೂಲಚಿತ್ರವನ್ನು ತೆಗೆದು ಅದರ ಚೌಕಟ್ಟಿನಲ್ಲಿ ಚತುರವಾದರೂ ಭವ್ಯವಲ್ಲದ ತನ್ನ ಹೊಸ ಚಿತ್ರವನ್ನು ಸೇರಿಸಿದನು. ಅರ್ಥಪುಷ್ಟಿಸಾಲದ ಹಲವು ಘಟನೆಗಳನ್ನು ಜೋಡಿಸಿದನು. ಪಾಶ್ಚಾತ್ಯ ವಿಮರ್ಶಕರೊಬ್ಬರು ಹೇಳುವಂತೆ[6] "ಉಜ್ಜ್ವಲವಾದ ದುರಂತ ಕಥೆಯೊಂದನ್ನು ಕೆಡಿಸಿ, ಕ್ಷುದ್ರವಾದ ಕುಟುಂಬ ತಂತ್ರಗಳ ಬಳಕೆಯ ವೃತ್ತಾಂತವೊಂದನ್ನು ಬೆಳಸಿದನು; ಸ್ವರ್ಗದ ಅಪ್ಸರೆಯನ್ನು ತಂದು ನಾಡಾಡಿಯ ರಾಣಿವಾಸದವಳನ್ನಾಗಿ ಪರಿವರ್ತಿಸಿದನು."

ಮೂಲಕಥೆಯ ಮಾತಿರಲಿ; ವಿಕ್ರಮೋರ್ವಶೀಯವು ಈಗ ರಚಿತವಾಗಿರುವ ರೀತಿಯಲ್ಲೇ ಅದರ ಪರ್ಯವಸಾನವು ಅಷ್ಟೊಂದು ಸಮಂಜಸವಾಗಿಲ್ಲ. ಉರ್ವಶಿ ಸ್ವರ್ಗಚ್ಯುತಳಾದಾಗ, ಪುರೂರವನು ಅವಳಲ್ಲಿ ಸಂತಾನವನ್ನು ಕಾಣುವತನಕ ಅವನ ಸಂಗಡ ಇರುವಂತೆ ಇಂದ್ರನು ಶಾಪಪರಿಹಾರವನ್ನು ಕರುಣಿಸಿದನು. ಅವನ ಮನಸ್ಸಿನ ಅಭಿಪ್ರಾಯದಂತೆ, ಉರ್ವಶಿಗೆ ಪುತ್ರಜನನವಾದ ಕೂಡಲೆ ಅವಳು ಸ್ವರ್ಗಕ್ಕೆ ಹಿಂದಿರುಗಬೇಕಾಗಿತ್ತು. "ದೃಷ್ಟಸಂತಾನಃ" ಎಂಬ ಮೂಲದ ಮಾತಿಗೆ ಇದೇ ಸ್ಫುಟಾರ್ಥ. (ವೈದಿಕ ಕಥೆಯಲ್ಲಿ ಇದಕ್ಕೂ ಮೊದಲೇ ಪುರೂರವನನ್ನು ಬಿಟ್ಟು ಹೋಗುತ್ತಾಳೆ.) ಆದರೆ ನಿಪುಣನಾದ ವಕೀಲನಂತೆ ಉರ್ವಶಿ ಇಂದ್ರವಚನದ ಅಂತರಾರ್ಥಗಳನ್ನೆಲ್ಲಾ ಪರ್ಯಾಲೋಚಿಸಿದಳು. ಪುರೂರವನಿಗೆ ತಿಳಿಯದಂತೆ ಪ್ರಸವಿಸಿ, ಹುಟ್ಟಿದ ಮಗನ ಮುಖವು ಅವನ ಕಣ್ಣಿಗೆ ಬೀಳದಂತೆ ಏರ್ಪಡಿಸಿದರೆ ತಾನು ಎಂದೆಂದಿಗೂ ಪ್ರಿಯನಿಂದ ಅಗಲಬೇಕಾಗಿಲ್ಲವೆಂದು ಕಂಡುಹಿಡಿದಳು. ತನ್ನ ದಿವ್ಯಶಕ್ತಿಯಿಂದ ಆ ರೀತಿ ನಡಸಿ, ವಿಧಿಯ ಕಣ್ಣಿಗೇ ಮಣ್ಣೆರಚಿದಳು. ಪುರೂರವನಲ್ಲಿ ಇವಳಿಗಿದ್ದ ವ್ಯಾಮೋಹವು ಸ್ವಾರ್ಥಪರವಾದದ್ದು. ಅದರ ಭರದಲ್ಲಿ ತನ್ನ ಮಾತೃಧರ್ಮವನ್ನೂ ಪೂರ್ಣವಾಗಿ ಮರೆತಳು. ಮಗು ಹುಟ್ಟಿದ ದಿವಸ ಚ್ಯವನಾಶ್ರಮದಲ್ಲಿ ಬಿಟ್ಟಂದಿನಿಂದ ಮತ್ತೆ ಆ ಋಷಿಗಳೇ ಹುಡುಗನನ್ನು ಆಸ್ಥಾ

[6] A. W. Ryder, *Kalidasa*, p. 119.

ನಕ್ಕೆ ಕಳಿಸುವವರೆಗೂ ಒಂದು ಸಲವಾದರೂ ಅವಳು ಪುರೂರವನ ಪಕ್ಕವನ್ನು ಬಿಟ್ಟು ಮಗನ ಬಳಿಗೆ ಹೋಗಿ ನೋಡಿಕೊಂಡು ಬಂದಿರಲಿಲ್ಲ. ವರ್ಷಗಳು ಗತಿಸಿದ ಮೇಲೆ ಪುನಃ ನೋಡಿದಾಗ ಆ ಹುಡುಗನನ್ನು ಗುರುತಿಸಲೇ ಆರಳು. ಗುರುತಿಸಲು ಹೇಗೆತಾನೆ ಸಾಧ್ಯ? "ತುಂಬ ದೊಡ್ಡವನಾಗಿದ್ದಾನೆ!" ಎಂದುಕೊಳ್ಳುತ್ತಾಳೆ. ಅತ್ತ ಪುರೂರವನು ರಾಜ್ಯಭಾರವನ್ನು ಕೂಡ ಅಲಕ್ಷಿಸಿ—ಇನ್ನು ಮೊದಲನೆಯ ಹೆಂಡತಿಯ ಮಾತೇಕೆ?—ಗಂಧಮಾದನ ಪರ್ವತದಲ್ಲಿ ಅಲೆಯುತ್ತಿರುತ್ತಾನೆ. ಈ ರೀತಿ ಇಬ್ಬರಲ್ಲೂ ಕರ್ತವ್ಯಪರಾಙ್ಮುಖವಾದ ವ್ಯಾಮೋಹವು ಹೇಗೆತಾನೆ ಮಂಗಳದಲ್ಲಿ ಮುಗಿಯಬಹುದು? ಆದರೆ ಕಾಳಿದಾಸನು ಈ ಅಸಾಮಂಜಸ್ಯವನ್ನು ಗಮನಿಸಲಿಲ್ಲ; ಗಮನಿಸಿದ್ದರೂ ನಾಟ್ಯನಿಬಂಧನೆಗಳ ವಜ್ರಮುಷ್ಟಿಯಿಂದ ತನ್ನ ಪ್ರತಿಭೆಯನ್ನು ಬಿಡಿಸಿಕೊಳ್ಳಲು ಅವನಿಗೆ ಸಾಧ್ಯವಾಗಲಿಲ್ಲ. ಈ ವಿಷಮ ಸನ್ನಿವೇಶದಲ್ಲಿ ವಸ್ತುರಚನೆ ಕೂಡ ಗಂಟುಗಂಟಾಗಿದೆ. ಕಲಹಪ್ರಿಯನಾದ ನಾರದನು ತನ್ನ ನಿತ್ಯಧರ್ಮದಂತೆ ಕೂಡಿದವರಿಬ್ಬರನ್ನಗಲಿಸದೆ, ಅಗಲತಕ್ಕವರಿಬ್ಬರನ್ನು ಕೂಡಿಸುವುದಕ್ಕೆ ಇದೇ ಪ್ರಥಮ ಸಂದರ್ಭವೆಂದು ತೋರುತ್ತದೆ. "ಮೋಡವಿಲ್ಲದೆ ಬರಿಯ ಮಿಂಚು ಇಳಿದಂತೆ" ಅವನು ಭೂಮಿಗೆ ಇಳಿದನು. ನಾಟಕದ ಕಥೆಯಲ್ಲೂ ಹಾಗೆಯೇ ಆಗಿದೆ. ವಿಶೇಷಭಯದ ಮಿಂಚೊಂದು ಮಿಂಚಿತು; ಆದರೆ ಮಳೆ ಸುರಿಯಲಿಲ್ಲ. ಸ್ಥಿರಸಂಯೋಗವೇ ವಿಚಿತ್ರವಾಗಿ ಫಲಿಸಿತು. ಶಾಸ್ತ್ರೀಯವಾದ ಮಂಗಳವನ್ನು ನಾರದನು ಹಾಡಿಬಿಟ್ಟನು. ಇದರಿಂದ ಮೂಲದ ದುರಂತ ಭಾವ ಕಣ್ಮರೆಯಾಯಿತು!

ವಿಕ್ರಮೋರ್ವಶೀಯದ ಕವಿತಾಸೌಂದರ್ಯಕ್ಕೆ ನಾವು ಎದೆಯೊಪ್ಪಿಸುತ್ತೇವೆ, ಉಪಮಾವೈಖರಿಗೆ ಬೆರಗಾಗುತ್ತೇವೆ, ಸಂವಾದಚಾತುರ್ಯಕ್ಕೆ ತಲೆದೂಗುತ್ತೇವೆ; ಆದರೆ ಅದರ ವಸ್ತುವಿಘಟನೆಗೆ ವಿಷಾದಪಡುತ್ತೇವೆ.

## ೩

ಕಾಳಿದಾಸನ ಮಿಕ್ಕ ನಾಟಕಗಳಲ್ಲಿರುವಂತೆಯೇ 'ಅಭಿಜ್ಞಾನ ಶಾಕುಂತಲ'ದಲ್ಲಿಯೂ ಶೃಂಗಾರವೇ ಪ್ರಧಾನರಸ. ಅದರ ನಾಯಿಕೆ ಶಕುಂತಲೆ—ಕಣ್ವಾಶ್ರಮದ ತರುಲತೆಗಳೊಂದಿಗೆ ತಾನೂ ಜಂಗಮಲತೆಯಾಗಿ ಬೆಳೆದು ಹುಲ್ಲೆನವಿಲುಗಳೊಂದಿಗೆ ಆಡಿಕೊಂಡು ಮುಗ್ಧತೆಯ ಮೂರ್ತಿಯಾಗಿದ್ದ ಶಕುಂತಲೆ. ದುಷ್ಯಂತ

ನನ್ನು ಮೊದಲ ಬಾರಿ ಕಂಡಾಗ ತನಗೆ ಅನುರಾಗವು ಅಂಕುರಿಸಿತೆಂಬುದನ್ನೂ ತಿಳಿಯದೆ, "ಇದೇನು, ಈತನನ್ನು ನೋಡಿ ತಪೋವನ ವಿರೋಧಿಯಾದ ವಿಕಾರಕ್ಕೆ ಒಳಗಾದೆನು!" ಎಂದು ತನ್ನೊಳಗೆ ತಾನು ವಿಚಾರಮಾಡುವಷ್ಟು ಸರಳೆ ಇವಳು. ಮುಂದೆ ಪ್ರೇಮಪ್ರವಾಹಕ್ಕೆ ಸಿಕ್ಕಿ, ಸಿಕ್ಕಿದರೂ ಸ್ವಾತಂತ್ರ್ಯವನ್ನವಲಂಬಿಸಲು ಹಿಂಜರಿದು ಹೆಣಗಿ, ಕಡೆಗೆ ದುಷ್ಯಂತನ ಭಾರ್ಯೆಯಾಗುತ್ತಾಳೆ; ಗರ್ಭಧಾರಿಣಿಯಾಗುತ್ತಾಳೆ. ಪ್ರಿಯನನ್ನು ಅಗಲಿದ ದಿನ ವಿರಹಚಿಂತೆಯಲ್ಲಿ ಮುಳುಗಿದ್ದಾಗ ದುರ್ವಾಸರ ಶಾಪಕ್ಕೆ ತನ್ನರಿವಿಲ್ಲದೆಯೇ ಗುರಿಯಾಗಿ, ಅದರ ಮಹಿಮೆಯಿಂದ ತನ್ನ ನೆನಪನ್ನು ಪೂರ್ಣವಾಗಿ ಮರೆತ ದುಷ್ಯಂತನ ಆಸ್ಥಾನಕ್ಕೆ ಆಮುಂದೆ ಹೋಗಿ ಅಲ್ಲಿ ಪೂರ್ಣ ತಿರಸ್ಕಾರವನ್ನು ಹೊಂದುತ್ತಾಳೆ. ಬಳಿಕ ತನ್ನ ತಾಯಿಯ ಪ್ರಭಾವದಿಂದ ಮಾರೀಚಾಶ್ರಮವನ್ನು ಸೇರಿ, ಚಕ್ರವರ್ತಿಲಕ್ಷಣಶಾಲಿಯಾದ ಪುತ್ರನನ್ನು ಪಡೆದು, ಅಲ್ಲೇ ವರ್ಷಗಟ್ಟಳೆ ಏಕವೇಣೀಧರಳಾಗಿ ತಪಸ್ಸನ್ನಾಚರಿಸುತ್ತಾಳೆ. ಈ ನಡುವೆ ಅಭಿಜ್ಞಾನದ ಉಂಗುರವನ್ನು ಕಂಡು ಅರಿವು ಮರಳಿದ ದುಷ್ಯಂತನ ಸತ್ಯವಾದ ಪಶ್ಚಾತ್ತಾಪವನ್ನು ಕೇಳಿ, ಹಳೆಯ ಕ್ಲೇಶವನ್ನು ಮರೆತು ಅವನನ್ನು ಪುನಃ ಅಂಗೀಕರಿಸುತ್ತಾಳೆ.—ಕಾಳಿದಾಸನು ಜಗತ್ತಿನಲ್ಲೇ ವಿಖ್ಯಾತಿಗೊಳಿಸಿರುವ ಈ ಕಥೆಯನ್ನು ಯಾರುತಾನೆ ಅರಿಯರು? ಇಲ್ಲಿ ಅದನ್ನು ಮತ್ತೆ ನಿರೂಪಿಸುವ ಸಾಹಸಕ್ಕೆ ಹೋಗದೆ ಪ್ರಕೃತ ವಿವೇಚನೆಗೆ ತೊಡಗಬಹುದು.

ವಿಕ್ರಮೋರ್ವಶೀಯದಲ್ಲಿ ಕಾಳಿದಾಸನು ದುರಂತವಾಗಬೇಕಾಗಿದ್ದ ಕಥೆಯ ಸತ್ತ್ವವನ್ನು ಕುಗ್ಗಿಸಿ ಅದನ್ನು ಮಂಗಳಾಂತವಾಗಿ ತಿರುಗಿಸಿದನೆಂದು ನೋಡಿದೆವು. ಶಾಕುಂತಲದಲ್ಲೂ ಪ್ರಥಮ ಪ್ರಣಯವಿದೆ, ಕಠೋರ ವಿಚ್ಛೇದವಿದೆ, ಅಂತ್ಯದಲ್ಲಿ ಪುನಸ್ಸಮಾಗಮವಿದೆ. ಈ ನಾಟಕದಲ್ಲಿ ಕಾಳಿದಾಸನ ಪ್ರತಿಭಾಪರಿಣತಿಯನ್ನೂ ಉದಾತ್ತ ವಸ್ತುರಚನೆಯನ್ನೂ ಕೊಂಡಾಡದ ವಿಮರ್ಶಕರಿಲ್ಲ. ಆದರೆ ಇದರ ಪರ್ಯವಸಾನವು ಉಚಿತವಾಗಿದೆಯೆ ಎಂಬ ವಿಚಾರ ಒಮ್ಮೊಮ್ಮೆ ಮೂಡದೆ ಇಲ್ಲ. ಐದನೆಯ ಅಂಕವನ್ನಂತೂ ಶಕುಂತಲೆಯ ಘೋರಾವಮಾನದ ದುರಂತಛಾಯೆ ಮುಸುಕಿದೆ. ಇದೆಲ್ಲ ನಡೆದ ಮೇಲೆ ಅವಳು ದುಷ್ಯಂತನನ್ನು ಮತ್ತೆ ಸ್ವೀಕರಿಸಿದಳೆಂದರೆ ಸಮರ್ಪಕವಾಗುತ್ತದೆಯೆ? ನಾಟಕ ಲಕ್ಷಣಕ್ಕೆ ಕಟ್ಟುಬಿದ್ದು ಇಲ್ಲಿಯೂ ಮತ್ತೊಮ್ಮೆ ಕಾಳಿದಾಸನು ಸಹಜ ದುರಂತವಾದ ಕಥೆಯನ್ನು ಅನುರೂಪವಲ್ಲದ ಮಂಗಳದಲ್ಲಿ ಮುಕ್ತಾಯಮಾಡಿದ್ದಾನೆಯೆ?—ಇದೇ ನಮ್ಮೆದುರಿಗಿರುವ ಪ್ರಶ್ನೆ.

ದುಷ್ಯಂತ–ಶಕುಂತಲೆಯರ ಪ್ರಣಯವೃತ್ತವು ದುರಂತ ಕಥೆಯಾಗುವುದಾದರೆ ಅಲ್ಲಿ ದುರಂತಪಾತ್ರ ಯಾರೆಂಬುದನ್ನು ಮೊದಲು ನೋಡಬೇಕು. ಆ ಪಾತ್ರ ದುಷ್ಯಂತನಂತೂ ಅಲ್ಲವೆಂದು ಕಷ್ಟವಿಲ್ಲದೆ ತಿಳಿದುಕೊಳ್ಳಬಹುದು. ಕಾಳಿದಾಸನ ನಾಟಕದಲ್ಲೂ ಅಷ್ಟೆ, ಅದಕ್ಕೆ ಆಧಾರವಾಗಿರುವ[7] ಮಹಾಭಾರತದ ಶಾಕುಂತಲೋಪಾಖ್ಯಾನದಲ್ಲೂ ಅಷ್ಟೆ—ದುಷ್ಯಂತನ ಪಾತ್ರದಲ್ಲಿ ಯಾವ ದುರಂತ ಗುಣವೂ ಕಾಣಬರುವುದಿಲ್ಲ. ಅವನು ಮಹಾಭಾರತದಲ್ಲಿ ಧೂರ್ತ ; ಶಾಕುಂತಲದಲ್ಲಿ ಧೀರೋದಾತ್ತ. (ಈ ಅಂಶವು ಕ್ಷಿಪ್ರದಲ್ಲೇ ವಿಶದವಾಗುತ್ತದೆ.) ಎರಡು ಕಡೆಗಳಲ್ಲೂ ಅವನ ಲೋಪದೋಷಗಳು ಯಾವುವೂ ದುರಂತ ಮಾರ್ಗದಲ್ಲಿ ಹರಿದು ನಮ್ಮ ವಿಷಾದವಿಸ್ಮಯಗಳಿಗೆ ಕಾರಣವಾಗತಕ್ಕವಲ್ಲ. ವಿಕ್ರಮೋರ್ವಶೀಯಕ್ಕೂ ಶಾಕುಂತಲಕ್ಕೂ ಇದೊಂದು ದೊಡ್ಡ ವ್ಯತ್ಯಾಸ. ಅಲ್ಲಿ ನಾಯಕನಾದ ಪುರೂರವನೇ ದುರಂತ ಪಾತ್ರ. ಇಲ್ಲಾದರೆ, ದುರಂತತೆಯುಂಟೆ ಎಂಬ ಚರ್ಚೆಗೆ ಸಿಕ್ಕತಕ್ಕವಳು ನಾಯಿಕೆ ಮಾತ್ರ.

ಮೊದಲು, ಮಹಾಭಾರತದ ಶಾಕುಂತಲೋಪಾಖ್ಯಾನದಲ್ಲಿ ಬಂದಿರುವ ಚಿತ್ರ ಹೇಗಿದೆಯೆಂಬುದನ್ನು ನೋಡುವುದು ಆವಶ್ಯಕ. ಲೆಕ್ಕಾಚಾರದ ಮನಸ್ಸಿನ ತಾಪಸ ಕನ್ಯೆಯೊಬ್ಬಳನ್ನು ಕಾಮುಕರಾಜನೊಬ್ಬನು ಮೋಹಿಸಿ ವಂಚಿಸುವುದೇ ಅಲ್ಲಿಯ ಕಥೆ. ದುಷ್ಯಂತನು ಶಕುಂತಲೆಯನ್ನು ಕಣ್ವರ ಆಶ್ರಮದಲ್ಲಿ ನೋಡಿದ ಕೂಡಲೆ ಕಾಮಿಸಿ, ಮನಸ್ಸಿನಲ್ಲಿಲ್ಲದ ಆಣೆಪ್ರಮಾಣಗಳಿಂದ ನಂಬಿಸಿ ಗಾಂಧರ್ವವಿಧಿಯಿಂದ ಪರಿಸುತ್ತಾನೆ. ಒಂದು ಮುಹೂರ್ತಕಾಲವಾದರೂ–ಫಲಸಮಿತ್ತುಗಳನ್ನು ತರಲು ಹೋಗಿದ್ದ ಕಣ್ವರು ಹಿಂದಕ್ಕೆ ಬರುವವರೆಗಾದರೂ—ಆತ್ಮಸಂಯಮನ ಮಾಡಲು ಅವನಿಗೆ ತಾಳ್ಮೆಯಿಲ್ಲ, ಮನಸ್ಸೂ ಇಲ್ಲ. ತನ್ನ ನಗರಕ್ಕೆ ಹಿಂದಿರುಗಿದ ಕೂಡಲೆ ಉದ್ದೇಶಪೂರ್ವಕವಾಗಿ ಶಕುಂತಲೆಯ ವಿಷಯವನ್ನು ಮರೆಯುತ್ತಾನೆ. ಇನ್ನು ಶಕುಂತಲೆಯ ಘನತೆ ವ್ಯಕ್ತವಾಗುವುದೂ ಅಷ್ಟರಲ್ಲೇ ಇದೆ. ಅವಳ ಮಾತುಕಥೆಗಳನ್ನೆಲ್ಲ ಪರಿಶೀಲಿಸಿದರೂ ದುಷ್ಯಂತನಲ್ಲಿ ಅವಳಿಗೆ ಅನುರಾಗವಿತ್ತೆಂಬುದೇ ಸ್ಫುಟವಾಗುವುದಿಲ್ಲ. ದುಷ್ಯಂತನನ್ನು ಅವಳು ವರಿಸಿದ್ದಕ್ಕೆ ತಾನು ರಾಜಮಾತೆಯಾಗಬೇಕೆಂಬ ಹೆಬ್ಬಯಕೆಯೊಂದೇ ಮುಖ್ಯಕಾರಣವೆಂದು ತೋರುತ್ತದೆ. ಅದರಿಂದ ಆ ನಿಬಂಧನೆಯೊಂದನ್ನೇ ಅವನ ಸಂಗಡ ಮಾಡಿಕೊಂಡಳು. ಈ ವಾಣಿಜ್ಯ

[7] ಪರಿಶಿಷ್ಟವನ್ನು ನೋಡಿ.

ಸಂಬಂಧದಲ್ಲಿ ಆರ್ದ್ರಭಾವವುಂಟೆ, ಲಲಿತಸನ್ನಿವೇಶವುಂಟೆ, ಅನುನಯಪ್ರಸಾದಗಳುಂಟೆ! ವರ್ಷಗಳು ಕಳೆದುವು. ಸರ್ವದಮನನು ಹುಟ್ಟಿ ಬೆಳೆದನು. ಕಡೆಗೆ ಕಣ್ವರು ತಾಯಿಮಕ್ಕಳನ್ನು ದುಷ್ಯಂತನ ಆಸ್ಥಾನಕ್ಕೆ ಕಳಿಸಿದರು. ದುಷ್ಯಂತನಿಗೆ ಶಕುಂತಲೆಯ ಗುರುತು ಸಿಕ್ಕಿತು; ಆದರೆ ಲೋಭದಿಂದಲೋ ಅಪವಾದ ಭೀತಿಯಿಂದಲೋ ತಾನು ಅವಳನ್ನು ಬಲ್ಲವನೇ ಅಲ್ಲವೆಂದು ಸಾಧಿಸುವನು; "ದುಷ್ಟತಾಪಸಿ, ಪುಂಶ್ಚಲಿ" ಎಂದು ಅವಳನ್ನು ದೂಷಿಸುವನು. ಶಕುಂತಲೆ ಇದಕ್ಕೆಲ್ಲಾ ಸಗ್ಗುವವಳಲ್ಲ. ಸತ್ಯಾಸತ್ಯಗಳನ್ನು ಕುರಿತು, ಪುತ್ರಪ್ರೇಮವನ್ನು ಕುರಿತು ದೀರ್ಘವಾದ ಉಪನ್ಯಾಸವನ್ನು ಸಭಾಮಧ್ಯದಲ್ಲಿ ನಿಂತು ಕೊಡುವಳು; ದುಷ್ಯಂತನ ಮಿಥ್ಯಾಚಾರವನ್ನು ಬಯಲಿಗೆಳೆಯುವಳು. ಇಷ್ಟಾದರೂ ಅವನು ದಾರಿಗೆ ಬಾರದಿರಲು, ನಿನ್ನ ಹಂಗಿಲ್ಲದೆಯೇ ನನ್ನ ಪುತ್ರನು ಶೈಲಸಾಗರ ಪರ್ಯಂತವಾದ ಭೂಮಿಯನ್ನಾಳುವನೆಂದು ಶಪಥಮಾಡಿ ಆಶ್ರಮಕ್ಕೆ ಹಿಂದಿರುಗುತ್ತಿರುವಳು. ಆ ವೇಳೆಗೆ ಅಂತರಿಕ್ಷದಲ್ಲಿ "ದುಷ್ಯಂತ, ಇವನು ನಿನ್ನ ಮಗ; ಶಕುಂತಲೆ ಸತ್ಯವನ್ನೇ ಹೇಳುತ್ತಾಳೆ. ಆದ್ದರಿಂದ ಇವನನ್ನು ಸ್ವೀಕರಿಸು" ಎಂಬ ಆಕಾಶವಾಣಿ ಕೇಳಿಸುವುದು. ಆಗ ದುಷ್ಯಂತನು ತನಗೆ ಎಲ್ಲವೂ ಮೊದಲಿನಿಂದಲೂ ತಿಳಿದಿತ್ತೆಂದೂ, ಲೋಕತೃಪ್ತಿಗಾಗಿ ಇಷ್ಟನ್ನು ನಡಸಿದ್ದಾಯಿತೆಂದೂ ಹೇಳಿ ಪತ್ನೀಪುತ್ರರನ್ನು ವಿಜೃಂಭಣೆಯಿಂದ ಸ್ವೀಕರಿಸುವನು.

ಈ ಕಥೆಯಲ್ಲಿ ಸಹಜವಾಗಿ ದುರಂತ ಗುಣವಿದೆ. ಕೊನೆಯಲ್ಲಿ ಅಂಟಿಕೊಂಡಿರುವ ಆಕಾಶವಾಣಿ ಪೌರಾಣಿಕ ದೃಷ್ಟಿಯಿಂದ ಎಷ್ಟೇ ಮುಖ್ಯವಾಗಿದ್ದರೂ ಕಥಾಬಂಧದ ದೃಷ್ಟಿಯಿಂದ ಅಸಂಗತವಾಗಿದೆ. ಕಥೆ ಈ ರೀತಿ ಮುಗಿಯುವುದೆಂಬುದಕ್ಕೆ ಮೊದಲಿನಿಂದ ಯಾವ ಸನ್ನಾಹವೂ ಇಲ್ಲ. ದುಷ್ಯಂತ–ಶಕುಂತಲೆಯರಿಗೆ ನಡೆದ ವ್ಯವಹಾರಕ್ಕೆ ವಿಚ್ಛೇದವೊಂದೇ ನ್ಯಾಯವಾದ ಪರಿಸಮಾಪ್ತಿ. ಇದೊಂದು ಲೋಕಸಾಧಾರಣವಾದ ವೃತ್ತ: ಕಾಮುಕನ ಜಾಲಕ್ಕೆಸಿಕ್ಕಿ ವಂಚಿತಳಾದ ಕನ್ಯೆಯ ಆಶಾಭಂಗದ ಕಥೆ. ಇದನ್ನು ನಾಟಕ ರೂಪಕ್ಕೆ ತಿರುಗಿಸಬೇಕೆಂದರೆ, ಶಕುಂತಲೆಯ ಗಂಡುಬೀರಿತನವನ್ನು ತಗ್ಗಿಸಿ, ಅವಳ ಮುಗ್ಧತೆಯನ್ನೂ ಅಶರಣತೆಯನ್ನೂ ಸ್ಪಷ್ಟವಾಗಿ ಚಿತ್ರಿಸಿ, ಕರುಣ ವಿಷಾದಗಳನ್ನು ಸುಲಭವಾಗಿ ಹೆಚ್ಚಿಸಬಹುದು. ಆದರೆ ಇಷ್ಟರಿಂದ ನಾಟಕದ ಭಾವವು ಉನ್ನತವಾಗಲಾರದು. ಇಲ್ಲಿಯ ದಾಂಪತ್ಯ ವ್ಯವಹಾರದಲ್ಲಿ ಘನತೆಯ ತಳಹದಿಯೇ ಇಲ್ಲ. ಈ ವಸ್ತುವನ್ನೊಳಕೊಂಡ ನಾಟಕವು

ದುರಂತವೇನೋ ಆಗಬಹುದು : ಆದರೆ ಅವರ ರಚನೆ ಎಷ್ಟೇ ಉತ್ತಮವಾಗಿದ್ದರೂ ಶಾಕುಂತಲ ನಾಟಕದ ನೆಲೆಗೆ ಅದು ಎಂದಿಗೂ ಏರಲಾರದು. ದುಷ್ಯಂತ, ಶಕುಂತಲೆ ಎಂಬ ಹೆಸರುಗಳು ಮಾತ್ರ ಮೂಲಕಥೆಗೂ ಕಾಳಿದಾಸನ ನಾಟಕಕ್ಕೂ ಸಮಾನವೇ ಹೊರತು ವಿವರಗಳಲ್ಲಿ ಒಂದಕ್ಕೊಂದಕ್ಕೆ ಹೋಲಿಕೆಯೇ ಇಲ್ಲ. ಇಲ್ಲಿ ಇತಿಹಾಸ ಪ್ರಸಿದ್ಧವಾದ ದುರಂತ ವಸ್ತುವನ್ನು ಕಾಳಿದಾಸನು ಕೈಬಿಟ್ಟನೆಂದು ಯಾರೂ ಆಕ್ಷೇಪಿಸುವ ಹಾಗಿಲ್ಲ; ಅದಕ್ಕೆ ಬದಲು, ಅದರ ಜಘನ್ಯತೆಯನ್ನು ತೊಡೆದುಹಾಕಿ ದಿವ್ಯತೆಯನ್ನು ಅಳವಡಿಸಿದನೆಂದು ಅವನನ್ನು ಹೊಗಳಬೇಕಾಗಿದೆ. ಆದ್ದರಿಂದ ಮೂಲಕಥೆಯ ಮಾತನ್ನು ಬಿಟ್ಟು ಈಗ ಶಾಕುಂತಲ ನಾಟಕದ ರಚನೆಯ ಕಡೆಗೇ ತಿರುಗೋಣ.

"ಬೆಸ್ತರವನ ಕೈಯಿಂದ ಉಂಗುರವನ್ನು ಪಡೆದು ದುಷ್ಯಂತನು ತನ್ನ ಭ್ರಾಂತಿಯನ್ನು ತಿಳಿದುಕೊಂಡ ಸ್ಥಳದಲ್ಲಿಯೇ, ವ್ಯರ್ಥವಾದ ಪರಿತಾಪದ ಮಧ್ಯದಲ್ಲಿಯೇ, ಪಾಶ್ಚಾತ್ಯ ಕವಿಯು ಶಾಕುಂತಲ ನಾಟಕವನ್ನು ಮುಗಿಸಿಬಿಡುತ್ತಿದ್ದನೆಂಬುದು ನಮ್ಮ ದೃಢವಾದ ನಂಬಿಕೆ. ಕೊನೆಯ ಅಂಕದಲ್ಲಿ ಸ್ವರ್ಗದಿಂದ ಹಿಂದಿರುಗುವ ದಾರಿಯಲ್ಲಿ ದೈವಯೋಗದಿಂದ ದುಷ್ಯಂತ ಶಕುಂತಲೆಯರು ಪುನಃ ಸೇರಿದುದು ಪಾಶ್ಚಾತ್ಯ ನಾಟಕ ರೀತಿಗೆ ಅನುಸಾರವಾಗಿ ಆವಶ್ಯಕವಾಗಿ ಸಂಭವಿಸಬೇಕಾದ ಘಟನೆಯಲ್ಲ; ಏಕೆಂದರೆ ಶಾಕುಂತಲ ನಾಟಕದ ಆರಂಭದಲ್ಲಿ ಬಿತ್ತಿದ ಬೀಜಕ್ಕೆ ಈ ವಿಚ್ಛೇದವೇ ಚರಮ ಫಲ. ಆದಾದ ಮೇಲೆಯೂ ದುಷ್ಯಂತ ಶಕುಂತಲೆಯರು ಪುನಃ ಕೂಡಿದುದು ಬಾಹ್ಯಸಾಧನದಿಂದ, ದೈವಾನುಗ್ರಹದಿಂದ; ನಾಟಕದಲ್ಲಿ ಅಂತರ್ಗತವಾದ ಯಾವ ಘಟನಾಸೂತ್ರದಲ್ಲಾಗಲಿ, ದುಷ್ಯಂತ ಶಕುಂತಲೆಯರ ವ್ಯವಹಾರವಾವುದರಲ್ಲಾಗಲಿ, ಈ ಪುನರ್ಮಿಳನಕ್ಕೆ ಮಾರ್ಗವಾವುದೂ ಇರಲಿಲ್ಲ."—ಹೀಗೆಂದು ರವೀಂದ್ರಠಾಕೂರರು ತಮ್ಮ ಉತ್ಕೃಷ್ಟ ಲೇಖನವೊಂದರಲ್ಲಿ[೬] ಬರೆಯುತ್ತಾರೆ. ಕಾಳಿದಾಸನ ನಾಟಕದ ವಸ್ತು ಕೂಡ ಸಹಜವಾಗಿ ದುರಂತವೆಂದು ಈ ಮಾತಿನ ಅಭಿಪ್ರಾಯ. ಇದನ್ನು ಅನುಸರಿಸಿದರೆ ಉಚಿತವಾಗುವ ಪರ್ಯವಸಾನವನ್ನು ಸೂಚಿಸುವುದೂ ಕಷ್ಟವಲ್ಲ. ದುಷ್ಯಂತನಿಂದ ತಿರಸ್ಕಾರ ಹೊಂದಿದ ಬಳಿಕ ಶಕುಂತಲೆ ಯಾವಜ್ಜೀವವೂ ತಪೋವೃತ್ತಿಯನ್ನಾಶ್ರಯಿಸಬಹುದು.

---

[೬] ರವೀಂದ್ರನಾಥ ಠಾಕೂರರ 'ಪ್ರಾಚೀನ ಸಾಹಿತ್ಯ' (ಟಿ. ಎಸ್. ವೆಂಕಣ್ಣಯ್ಯನವರ ಕನ್ನಡ ಪರಿವರ್ತನ)—ಕುಮಾರಸಂಭವ ಮತ್ತು ಶಾಕುಂತಲ, ಪು. ೧೯.

(ಅಥವಾ ದುಃಖಾವೇಗದಲ್ಲಿ ಪ್ರಾಣತ್ಯಾಗವನ್ನೇ ಮಾಡಬಹುದು.) ಇತ್ತ ದುಷ್ಯಂತನಿಗೂ ಪ್ರಿಯೆ ಅತಿಕ್ರಾಂತಳಾದ ಬಳಿಕ ಉಂಗುರ ದೊರೆತು, ಅವನು ಅಳವಿಲ್ಲದ ಅಂತ್ಯವಿಲ್ಲದ ಪಶ್ಚಾತ್ತಾಪದಲ್ಲಿ ಮುಳುಗಬಹುದು. ನಾಯಕ ನಾಯಿಕೆಯರಿಗೆ ಪುನರ್ದರ್ಶನಕ್ಕೆ ಅವಕಾಶಕೊಡದೆ—ಕೊಟ್ಟರೂ ಪುನಸ್ಸಂಗಮವನ್ನು ನಿಷೇಧಿಸಿ—ನಾಟಕವನ್ನು ದುಃಖದಲ್ಲಿ ಕೊನೆಗಾಣಿಸಬಹುದು.

ಈ ಪಕ್ಷವನ್ನು ಹಿಡಿದಲ್ಲಿ ಇಂಥ ಸಮಾಪ್ತಿಯ ಔಚಿತ್ಯವೇನು?—ಶಾಕುಂತಲ ನಾಟಕವನ್ನು ಶಕುಂತಲೆಯ ದೃಷ್ಟಿಯಿಂದಲೂ ನೋಡತಕ್ಕದ್ದು ಅಗತ್ಯ. ಮಂದಿಯ ಮುಂದೆ ತನ್ನನ್ನು ನಿರಾಕರಿಸಿದ ದುಷ್ಯಂತನೊಂದಿಗೆ ಶಕುಂತಲೆ ಮತ್ತೆ ಹೇಗೆ ಸಮಾಧಾನದಿಂದ ಸಂಸಾರ ಮಾಡಬಹುದು? ಹೆಣ್ಣು ಜೀವವಾದ ಮಾತ್ರಕ್ಕೆ ಮಾನಮರ್ಯಾದೆಗಳೇ ಇಲ್ಲವೆ ? ದುಷ್ಯಂತನ ಗುಣದಲ್ಲಿ ಎಳ್ಳಷ್ಟಾದರೂ ಶಂಕೆಯನ್ನಿಡದೆ, ಮುಗ್ಧತೆಯಿಂದ ತನ್ನ ಹೃದಯ ಸರ್ವಸ್ವವನ್ನೂ ಅರ್ಪಿಸಿದುದೊಂದೇ ಅವಳ ಅಪರಾಧ. ಅವಳ ನೆಚ್ಚಿಕೆಗೆ ವಜ್ರಕರ್ಕಶವಾದ ಫಲವು ದೊರೆಯಿತು. “ಮದುವೆಯಲ್ಲೇ ಆರ್ಯಪುತ್ರನಿಗೆ ಸಂದೇಹ. ಬಹುದೂರಕ್ಕೆ ಏರಿದ್ದ ನನ್ನ ಆಸೆ ಇನ್ನೆಲ್ಲಿ!” ಎಲ್ಲವೂ ಭಗ್ನವಾಯಿತು. ಪಾಪದ ಸೊಂಕನ್ನರಿಯದವಳಿಗೆ ಸ್ವಚ್ಛಂದಚಾರಿಣಿಯೆಂಬ ಅಪವಾದ ಕಳಂಕ ಹತ್ತಿತು. ತನ್ನನ್ನು ಇಂಥ ಅವನತಿಗೆ ಗುರಿಮಾಡಿದವನ ಅಪರಾಧವನ್ನು ಶಕುಂತಲೆ ಮರೆಯಬಹುದೆ; ಮುಂದೆ ಅವನು ಪಶ್ಚಾತ್ತಾಪ ಪಟ್ಟರೂ ಅವನೊಂದಿಗೆ ಬೆರೆಯಬಹುದೆ ? ಶಕುಂತಲೆಗೆ ಅವನಲ್ಲಿ ಪ್ರೇಮ ಅಳಿಸದಿರಬಹುದು; ಆದರೆ ಪುನಸ್ಸಮಾಗಮ ಮಾತ್ರ ಅನುಚಿತ. ಉತ್ತರರಾಮಾಯಣದಲ್ಲಿ ಸೀತೆಯ ಅವಸ್ಥೆ ಹೇಗೋ ಇಲ್ಲಿ ಶಕುಂತಲೆಯದೂ ಹಾಗೆಯೇ. ಲಂಕೆಯಲ್ಲಿ ಅಗ್ನಿಶುದ್ಧಿಯನ್ನು ನಡಸಿ ಸೀತೆ ಪಾವನೆಯೆಂದರಿತು ರಾಮನು ಅವಳನ್ನು ಅಯೋಧ್ಯೆಗೆ ಕರೆತಂದನು. ಜನದ ಮಾತಿಗೆ ಹೆದರಿ ಪೂರ್ಣ ಗರ್ಭಿಣಿಯನ್ನು—ಅವಳಲ್ಲಿ ತಪ್ಪಿಲ್ಲವೆಂದು ತಿಳಿದೂ ತಿಳಿದೂ—ಮೋಸದಿಂದ ಕಾಡಿಗಟ್ಟಿದನು. ಮುಂದೆ ಅಶ್ವಮೇಧಯಾಗ ಕಾಲದಲ್ಲಿ ವಾಲ್ಮೀಕಿಯೇ ಬಂದು ಕೇಳಿಕೊಂಡಾಗ, ಸೀತೆ ತನ್ನ ಪವಿತ್ರತೆಯನ್ನು ಜನಸಮಕ್ಷದಲ್ಲಿ ಸ್ಥಾಪಿಸುವುದಾದರೆ ಅವಳನ್ನು ಸ್ವೀಕರಿಸುತ್ತೇನೆಂದು ಹೇಳಿದನು. ಆದರೆ ಇಂಥ ಮಾನಹಾನಿಕರವಾದ ಪರೀಕ್ಷೆಗೆ ಸೀತೆ ಎಷ್ಟು ಬಾರಿ ಒಪ್ಪುತ್ತಾ ಹೋಗಬಹುದು? ಆ ಘೋರ ಪರೀಕ್ಷೆಯ ಕಾಲದಲ್ಲಿ, “ರಾಘವನನ್ನುಳಿದು ಅನ್ಯರನ್ನು ಮನಸ್ಸಿನಲ್ಲೂ ಹೇಗೆ ನಾನು ನೆನೆ

ಯೆನೋ, ಹಾಗೆಯೇ ಭೂದೇವಿ ನನಗಾಗಿ ಬಾಯಿ ತೆರೆಯಲಿ" ಎಂದು ಅವಳು ಬೇಡಲಿಲ್ಲವೆ ? ಶಕುಂತಲೆಯ ಸ್ಥಿತಿ ಇನ್ನೇನು : ಅವಳು ಐದನೆಯ ಅಂಕದ ಘೋರ ತಿರಸ್ಕಾರದ ಕೊನೆಯಲ್ಲಿ ಹೆಚ್ಚುಕಡಮೆ ಅದೇ ಮಾತುಗಳಲ್ಲಿ "ಭಗವತಿ ವಸುಂಧರೆ, ನನಗಾಗಿ ಬಾಯಿ ತೆರೆ" ಎಂದು ರೋದಿಸುವುದಿಲ್ಲವೆ ? ಶಕುಂತಲೆಯ ಕೊನೆಯೂ ಸೀತೆಯ ಕೊನೆಯನ್ನೇ ಏಕೆ ಅನುಸರಿಸಬಾರದು ?—ಹೀಗೆಂದು ವಾದಿಸಬಹುದು.

ಇವೆರಡು ಸಂದರ್ಭಗಳಿಗೂ ಪೂರ್ಣಸಾಮ್ಯವುಂಟೆಂದು ತೋರುವುದು ಮೇಲು ನೋಟಕ್ಕೆ ಮಾತ್ರ. ಒಳಹೊಕ್ಕು ಪರಿಶೀಲಿಸಿದರೆ ಶಕುಂತಲೆಯ ಪರಿಸ್ಥಿತಿ ತುಂಬ ಬೇರೆಯಾಗುತ್ತದೆ. ಉತ್ತರ ರಾಮಾಯಣದಲ್ಲಿ ಸೀತೆ ನಿರ್ದೋಷಿಯೆಂದು ರಾಮ ನಿಗೆ ಉದ್ದಕ್ಕೂ ಗೊತ್ತಿತ್ತು. ಆದರೂ ಅವಳ ಪರಿಶುದ್ಧತೆಗೆ ನಿದರ್ಶನವನ್ನು ಮತ್ತೆ ಮತ್ತೆ ನಿರ್ದಾಕ್ಷಿಣ್ಯವಾಗಿ ಅಪೇಕ್ಷಿಸಿದನು. ಇಲ್ಲಾದರೆ ಶಕುಂತಲೆ ತನ್ನ ಪತ್ನಿ ಯೆಂಬುದರ ಅರಿವೇ ದುಷ್ಯಂತನಿಗಿಲ್ಲ. ಅದೊಂದು ಮರೆತುಹೋಗದಿದ್ದರೆ, ಅವನು ಶಕುಂತಲೆಯನ್ನು ಇದುವರೆಗೂ ಆಶ್ರಮದಲ್ಲಿ ಬಿಟ್ಟು ಅವಳು ತಾನಾಗಿಯೇ ಆಸ್ಥಾನಕ್ಕೆ ಬರುವಂತೆ ಮಾಡುತ್ತಿದ್ದನೆ ? ಶಕುಂತಲೆಯನ್ನು ಅಗಲುವಾಗ ಮಾತು ಕೊಟ್ಟಿದ್ದಂತೆ ತನ್ನ ಉಂಗುರದಲ್ಲಿ ಕೆತ್ತಿದ್ದ "ದುಷ್ಯಂತ" ಎಂಬ ಅಕ್ಷರ ಗಳನ್ನು ದಿವಸಕ್ಕೊಂದರಂತೆ ಅವಳು ಎಣಿಸಿ ಮುಗಿಸುವುದರೊಳಗಾಗಿ ತನ್ನ ಅರಮನೆಗೆ ವೈಭವದಿಂದ ಕರೆತರುತ್ತಿದ್ದನು. ಆದರೆ ದುಷ್ಯಂತನು ಕಣ್ವಾಶ್ರಮ ವನ್ನು ಬಿಟ್ಟು ಹೊರಟ ದಿನವೇ[೮] ಶಕುಂತಲೆಯ ವ್ಯಗ್ರತೆಯಿಂದ ದುರ್ವಾಸರ ಶಾಪವು ಬಡಿದು, ದುಷ್ಯಂತನ ಸ್ಮೃತಿಯೊಂದಿಗೆ ಇಬ್ಬರ ಸುಖವೂ ಮಸುಳಿ ಹೋಯಿತು. ಆದ್ದರಿಂದಲೇ ಯಾರೆಷ್ಟು ಜ್ಞಾಪಿಸಿದರೂ ತಾನೇ ಎಷ್ಟು ಪ್ರಯ ತ್ನಿಸಿದರೂ ದುಷ್ಯಂತನಿಗೆ ಶಕುಂತಲೆಯನ್ನು ವರಿಸಿದ ನೆನಪು ಬಾರದು. ದುರ ದೃಷ್ಟವಶದಿಂದ ಅವಳು ಅಭಿಜ್ಞಾನದ ಉಂಗುರವನ್ನು ಬೇರೆ ಕಳೆದುಕೊಂಡಿ ದ್ದಾಳೆ. ಆದರ ದರ್ಶನವಾದರೆ ಮಾತ್ರ ದುಷ್ಯಂತನ ನೆನಪು ಮರಳೀತು. ಇಂಥ

[೮] ನಾಲ್ಕನೆಯ ಅಂಕದ ವಿಷ್ಕಂಭದ ಮೊದಲಲ್ಲಿ "ಇಂದು (ಅದ್ಯ) ಆ ರಾಜರ್ಷಿ ಯಾಗವನ್ನು ಮುಗಿಸಿ ಋಷಿಗಳನ್ನು ಬೀಳ್ಕೊಂಡು ತನ್ನ ಪುರವನ್ನು ಪ್ರವೇಶಿಸಿ...." ಎಂದು ಅನಸೂಯೆ ಹೇಳುವುದನ್ನೂ ಆದಾದ ಕೊಂಚ ಹೊತ್ತಿಗೇ ದುರ್ವಾಸನು ಬರುವುದನ್ನೂ ಗಮನಿಸಬಹುದು.

ವಿಷಮಸ್ಥಿತಿಯಲ್ಲಿ ಅವನು ಶಕುಂತಲೆಯನ್ನು ನಿರಾಕರಿಸದೆ ಮತ್ತೇನು ಮಾಡ ಬಹುದು !

ಆದರೂ ದುಷ್ಯಂತನು ಶಕುಂತಲೆಯನ್ನೂ ಅವಳೊಂದಿಗೆ ಬಂದಿದ್ದ ಆಶ್ರಮ ವಾಸಿಗಳನ್ನೂ ಎಷ್ಟು ಸೌಜನ್ಯದಿಂದ ಕಾಣುತ್ತಾನೆ, ಅಸಹನಶೀಲನಾದ ಶಾರ್ಙ್ಗ ರವನೊಡನೆ ಕೂಡ ಎಷ್ಟು ಗಂಭೀರವಾಗಿ ಮಾತಾಡುತ್ತಾನೆ ! ಕಡೆಗೆ ಶಕುಂತಲೆ ಅಪಮಾನದ ದುಃಖರೋಷಗಳಿಂದ ಉದ್ವೇಗಗೊಂಡು "ಅನಾರ್ಯ" ಎಂದು ತನ್ನನ್ನು ಕರೆದಾಗಲೂ ಅವನು ಕೆರಳುವುದಿಲ್ಲ. ಇಲ್ಲಿ ಶಕುಂತಲೆಯನ್ನು ವಂಚಿಸಿದನೆಂದು ಅವನನ್ನು ತಿರಸ್ಕರಿಸುವ ಬದಲು, ಇದೇ ಸಮಯದಲ್ಲೇ, ದೊಡ್ಡ ಪ್ರಲೋಭನ ವೊಂದಕ್ಕೆ ಒಳಗಾಗಲಿಲ್ಲವೆಂದು ಅವನನ್ನು ನಾವು ಗೌರವಿಸಬೇಕಾಗುತ್ತದೆ. ಶಕುಂತಲೆಯನ್ನು ಸ್ವೀಕರಿಸುವುದು ಅವನಿಗೆ ತುಂಬ ಸುಲಭವಾಗಿತ್ತು. ಇವ ರೆಲ್ಲರೂ ಅದಕ್ಕಾಗಿಯೇ ಆಸ್ಥಾನಕ್ಕೆ ಬಂದಿದ್ದರು ; ಅದನ್ನೇ ಒತ್ತಿ ಒತ್ತಿ ಕೋರು ತ್ತಿದ್ದರು. ಇದರ ಮೇಲೆ ಶಕುಂತಲೆಯ ಲಾವಣ್ಯ ಎಷ್ಟು ಸಮ್ಮೋಹಕವೆಂದರೆ, ದುಷ್ಯಂತನ ಪ್ರತೀಹಾರಿಯೇ ಹೇಳುವಂತೆ "ಅನಾಯಾಸವಾಗಿ ದೊರೆತ ಇಂಥ ರೂಪವನ್ನು ನೋಡಿ ಬೇರೆ ಯಾರು ವಿಚಾರಮಾಡುವರು !" ಆದರೆ ದುಷ್ಯಂತನ ಮನಸ್ಸು ನಿಶ್ಚಲ. ಶಕುಂತಲೆ ಪರಪತ್ನಿಯೆಂದು ತಿಳಿದುಕೊಂಡಿರುವುದರಿಂದ ಅವಳನ್ನು ದಿಟ್ಟಿಸಿ ನೋಡುವುದಕ್ಕೂ ಹಿಂಜರಿಯುವನು. ಈ ಪ್ರಸಂಗವು ಶಕುಂತ ಲೆಯ ಸಹನೆಯನ್ನು ಹೇಗೆ ಪರೀಕ್ಷಿಸಿತೋ ದುಷ್ಯಂತನ ಧರ್ಮವನ್ನೂ ಹಾಗೆಯೇ ಪರೀಕ್ಷಿಸಿತು. ಇಲ್ಲಿ ಉದ್ದಕ್ಕೂ ಅಷ್ಟೇ; ದುಷ್ಯಂತನಲ್ಲಿ ಎಳ್ಳಷ್ಟಾದರೂ ತಪ್ಪಿಲ್ಲ. ಅವನಲ್ಲಿ ನಮಗಿರುವ ಗೌರವವು ಈ ಅಂಕದಲ್ಲೇ ಮುಗಿಲು ಮುಟ್ಟುವುದು.

ಇಲ್ಲಿ ಒಂದು ಆಕ್ಷೇಪಣೆ ತಲೆಯೆತ್ತಬಹುದು : ದುಷ್ಯಂತನೇನೋ ನಿಜವಾಗಿ ಧರ್ಮಾತ್ಮನೇ; ಆದರೆ ಐದನೆಯ ಅಂಕದಲ್ಲಿ, ಶಕುಂತಲೆಯ ದೃಷ್ಟಿಯಲ್ಲಿ ಮಾತ್ರ ವಂಚಕನೇ ಸರಿ—ಆದ್ದರಿಂದ ಅವಳ ಮಟ್ಟಿಗಾದರೂ ದುಷ್ಯಂತನು ವಂಚಕನೇ ಆಗಲಿಲ್ಲವೆ ? ನಿಜ. ತನ್ನ ಸಖಿಯರ ಕ್ರೂರ ಕಾರುಣ್ಯದ ಫಲವಾಗಿ ಶಕುಂತಲೆಗೆ ದುರ್ವಾಸರ ಶಾಪದ ವೃತ್ತಾಂತವೂ ಅದರ ಭೀಷಣಪರಿಣಾಮವೂ ತಿಳಿದಿರಲಿಲ್ಲ ; ಆದ್ದರಿಂದಲೇ ದುಷ್ಯಂತನು ಧರ್ಮಕಂಚುಕವನ್ನು ತೊಟ್ಟ ಮಿಥ್ಯಾ ಚಾರಿಯೆಂದು ಭಾವಿಸಿ ಅಳವಿಲ್ಲದ ಯಾತನೆಯನ್ನು ಪಟ್ಟಳು. ಆದರೆ ಶಾಪದ ವೃತ್ತಾಂತವನ್ನು ನಾವು ಬಲ್ಲೆವು ; ಶಕುಂತಲೆಯ ಪಕ್ಷದಲ್ಲಿ ಎಷ್ಟರಮಟ್ಟಿಗೆ

ನ್ಯಾಯವಿತ್ತೋ ದುಷ್ಯಂತನ ಪಕ್ಷದಲ್ಲೂ ಅಷ್ಟರಮಟ್ಟಿಗೆ ನ್ಯಾಯವಿತ್ತೆಂದು ನಾವು ಬಲ್ಲೆವು. ಇದರಿಂದ ಸನ್ನಿವೇಶದ ಬಣ್ಣವೇ ಪೂರ್ಣವಾಗಿ ಬದಲಾಯಿಸುವುದಿಲ್ಲವೆ? ಒಂದು ಕಡೆ ನಮ್ಮ ಅನುಕಂಪವು ಆ ಸರಳಹೃದಯದ ಮುಗ್ಧೆಯ ಬಳಿಗೆ ಹರಿಯುತ್ತದೆ; ಇನ್ನೊಂದು ಕಡೆ ನಮ್ಮ ಗೌರವವು ಕೈಗೆ ಬಂದ ಸುಂದರಿಯನ್ನು ತನ್ನವಳಲ್ಲವೆಂದು ತ್ಯಜಿಸಿದ ಧೀರೋದಾತ್ತನ ಮೇಲೆ ನೆಲಸುತ್ತದೆ. ಹೀಗೆ ಶಾಕುಂತಲದ ಐದನೆಯ ಅಂಕದಲ್ಲಿ ಎರಡು ಧರ್ಮಗಳಿಗೆ ಹೋರಾಟವು ನಡೆದರೂ, ಸದ್ಯದ ಸನ್ನಿವೇಶವನ್ನು ದುರಂತಚ್ಛಾಯೆ ಮುಸುಕಿದ್ದರೂ, ಇದರ ಪರ್ಯವಸಾನವೂ ದುರಂತವೇ ಆಗಬೇಕೆಂದು ತೋರುವುದಿಲ್ಲ. ಶಕುಂತಲೆಗೆ ಅತ್ಯಸಂಗತವಾದ ಸಂಕಟವೊದಗಿದರೂ ಅದು ಅವಳ ಹೃದಯವನ್ನು ಸರ್ವಕಾಲಕ್ಕೂ ವಿರಸಗೊಳಿಸಬೇಕೆಂದು ತೋರುವುದಿಲ್ಲ. ಪೂರ್ಣಗ್ರಹಣವು ಹಿಡಿದರೂ ಲೋಕವನ್ನು ಎಷ್ಟುಕಾಲ ಅಂಧಕಾರದಲ್ಲಿ ಮುಳುಗಿಸಬಹುದು? ಆದಕಾರಣ, ಶಕುಂತಲೆಗೆ ದುಷ್ಯಂತನ ನಿಜಸ್ವಭಾವ ಮುಂದೆ ಗೊತ್ತಾದ ಹೊರತು, ಅವಳ ಕದಡಿದ ಮನಸ್ಸು ತಿಳಿದಹೊರತು, ಇದುವರೆಗಿನ ಸಂಘಟನೆಗಳ ಆಕಾಂಕ್ಷೆ ಪೂರ್ಣವಾಗುವುದಿಲ್ಲ.

ಶಕುಂತಲೆಯನ್ನು ದುರಂತ ನಾಯಿಕೆಯನ್ನಾಗಿ ಕ್ಷಣಕಾಲ ಭಾವಿಸೋಣ. ಅವಳ ದುರಂತ ದೋಷ (tragic flaw) ಯಾವುದು? "ಶಕುಂತಲೆಯಲ್ಲಿ ಯಾವಾಗ ಆತಿಥ್ಯ ಧರ್ಮವು ಸ್ವಲ್ಪವಾದರೂ ಉಳಿಯಲಿಲ್ಲವೋ, ದುಷ್ಯಂತನೇ ಸಮಸ್ತವೂ ಆದನೋ ಆಗ ಶಕುಂತಲೆಯ ಆ ಪ್ರೇಮದಲ್ಲಿ ಶುಭವು ಉಳಿಯಲಿಲ್ಲ"[10] "ದುರ್ವಾಸರ ಶಾಪವು ಕವಿಯ ರೂಪಕ ಮಾತ್ರ; ದುಷ್ಯಂತ ಶಕುಂತಲೆಯರ ಸ್ವಚ್ಛಂದವಾದ ಗುಪ್ತಸಮಾಗಮವು ಚಿರಕಾಲದ ಅಭಿಶಾಪದಿಂದ ಶಪಿತವಾದದ್ದು."[11] ಹೀಗೆಂದು ಠಾಕೂರರು ಬರೆಯುತ್ತಾರೆ. ಶಕುಂತಲೆ ತನ್ನ ರಮಣನಲ್ಲಿ ಅನನ್ಯನಿರೀಕ್ಷಕವಾದ ಮೋಹವನ್ನಿಟ್ಟು, ಕಣ್ವರು ತನಗೆ ನೇಮಿಸಿದ್ದ ಆತಿಥಿಪೂಜಾಕರ್ತವ್ಯವನ್ನು ಕೂಡ ಮರೆತದ್ದರ ಫಲವಾಗಿ ದುರ್ವಾಸರ ಶಾಪವೊದಗಿತು; ಸ್ವಾರ್ಥನಿಷ್ಠವಾದ, ಧರ್ಮವಿಘಾತಕವಾದ ವ್ಯಾಮೋಹವೇ ಅವಳ ದುಃಖ ಪರಂಪರೆಗೆ ಬೀಜ ಎಂದು ಹೇಳಿದಂತಾಯಿತು. ಶಕುಂತಲೆ ತನ್ನ ಪತಿಯನ್ನು

---

10 ಕುಮಾರಸಂಭವ ಮತ್ತು ಶಾಕುಂತಲ, ಪು. ೨೪–೫.

11 ಅದೇ. ಪು. ೨೬.

ಅಗಲಿದ ದಿನ ಅವನ ಚಿಂತೆಯಲ್ಲೇ ಮೈಮರೆತು ದುರ್ವಾಸರ ಆಗಮನವನ್ನು ಲಕ್ಷಿಸದೆ ಹೋದದ್ದು ನಿಜ. ಆದರೆ ಇದಕ್ಕಿಂತಲೂ ಸಹಜವಾದ ಸಂಗತಿ ಯಾವುದುಂಟು ? ಅದೊಂದು ದಿನವಾದರೂ ಅವಳಿಗೆ ಅಷ್ಟು ಹಕ್ಕಿಲ್ಲವೆ ? ಈ ರೀತಿ ನಡೆದದ್ದರಿಂದ ಕರ್ತವ್ಯಲೋಪವೇನೋ ಸಂಘಟಿಸಿತು. ಆದರೆ ಎಂಥ ತಪ್ಪು, ಎಂಥ ಶಿಕ್ಷೆ! ಇಷ್ಟು ಸಾಲದೆ ಅವಳ ಜೀವನ, ಎಂದೆಂದಿಗೂ ಕಗ್ಗತ್ತಲೆಯಾಗಬೇಕೆ ? ದುರಂತ ಪ್ರಪಂಚದಲ್ಲಿ ಕೂಡ ದೋಷ ದಂಡನೆಗಳಿಗೆ ಅನುರೂಪತೆಯಿಲ್ಲದಿದ್ದರೂ ಅರ್ಥಸಹಿತವಾದ ಸಂಬಂಧವಾದರೂ ಬೇಡವೆ ?

ನಾಟಕದಲ್ಲಿ ಈಗ ಅವಳಿಗೆ ಒದಗಿರುವ ಸಂಕಟಕ್ಕೇ ಅವಳ ಅಲ್ಪ ಲೋಪವನ್ನು ಹೊಣೆಮಾಡಲು ಮನಸ್ಸೊಪ್ಪುವುದಿಲ್ಲ. ದುರದೃಷ್ಟವು—ಹೆಜ್ಜೆ ಹೆಜ್ಜೆಗೂ ಅವಳನ್ನು ಬೆನ್ನಟ್ಟಿದಂತೆ ತೋರುತ್ತದೆ. ಉಗ್ರಕೋಪದ ದುರ್ವಾಸನು ನೆವ ದೊರೆತದ್ದೇ ಸಾಕೆಂದು ಅವಳನ್ನು ಘೋರವಾಗಿ ಶಪಿಸುತ್ತಾನೆ. ಬಳಿಕ ಮರುಗಿ ಪರಿಹಾರವನ್ನು ಹೇಳಿದರೂ, ಅದಕ್ಕೆ ಏಕಮಾತ್ರ ಸಾಧನವಾದ ಉಂಗುರವು ಶಚೀತೀರ್ಥದಲ್ಲಿ ಬಿದ್ದು ಹೋಗುತ್ತದೆ. ಶಾಪದ ರಹಸ್ಯವನ್ನು ಬಲ್ಲ ಅನಸೂಯೆ ಪ್ರಿಯಂವದೆಯರಿಬ್ಬರೂ ಶಕುಂತಲೆಯ ಜೊತೆಗೆ ಬಾರದೆ ಆಶ್ರಮದಲ್ಲೇ ನಿಲ್ಲಬೇಕಾಗುತ್ತದೆ. ಕಡೆಗೆ ದುಷ್ಯಂತನಿಂದ ಹಿಂದೆ ಶಕುಂತಲೆಯ ವಿಷಯವನ್ನು ಕೇಳಿದ್ದ ವಿದೂಷಕನು ಕೂಡ ಅವಳ ಆಗಮನದ ವೇಳೆಗೆ ಸರಿಯಾಗಿ ಕಾರ್ಯಾಂತರದ ಮೇಲೆ ರಾಜಸಮೀಪವನ್ನು ಬಿಟ್ಟುಹೋಗಿ ಆ ಸಂಗತಿಯನ್ನು ಜ್ಞಾಪಿಸುವುದಕ್ಕೆ ಇಲ್ಲವಾಗುತ್ತಾನೆ. ವಿಷಮಸಂಘಟನೆಗಳು ಹೇಗೆ ಹೆಣೆದುಕೊಂಡಿವೆ! ಶಕುಂತಲೆಯ ದುಃಖಕ್ಕೆಲ್ಲಾ ಒಟ್ಟಿನ ಮೇಲೆ ಇವೇ ಕಾರಣವೆನ್ನಬೇಕು. ಕಥೆಯ ದುರಂತಾಂಶವು ಮುಖ್ಯವಾಗಿ ಈ ಘಟನೆಗಳಿಂದ ಏರ್ಪಡುತ್ತದೆಯೇ ಹೊರತು ಅವಳ ಚಾರಿತ್ರದ ಲೋಪದಿಂದಲೇ ಅಲ್ಲ. ಆದ್ದರಿಂದಲೇ ಅವಳ ಕಥೆಗೆ ದುರಂತ ಪರ್ಯವಸಾನವು ಉಚಿತವಾಗುವುದಿಲ್ಲವೆಂದೂ ಅದರಿಂದ ನಾಟಕದ ಸತ್ತ್ವವು ಕುಗ್ಗುವುದೆಂದೂ ಹೇಳಬೇಕಾಗುತ್ತದೆ. ಕೇವಲ ಘಟನೆಗಳ ಮಹಿಮೆಯಿಂದ ದುರಂತವಾಗುವ ನಾಟಕವು ಮೇಲುದರ್ಜೆಯದಲ್ಲವೆಂದು ರಸಜ್ಞರು ಬಲ್ಲರು.

ಶಾಕುಂತಲದಲ್ಲಿ ಬಂದಿರುವ ಋಷಿಶಾಪವು ಚೈತ್ರದ ನಡುಹಗಲಿನಲ್ಲಿ ಹಠಾತ್ತಾಗಿ ಒದಗುವ ಮುಂಗಾರು ಮೋಡದಂತೆ. ಆಲಿಕಲ್ಲು ಮಳೆಗಾಳಿಗಳ ಹೊಡೆತದಲ್ಲಿ, ಸಿಡಿಲು ಗುಡುಗುಗಳ ಆರ್ಭಟದಲ್ಲಿ, ದಿನದ ಉಲ್ಲಾಸವೆಲ್ಲ ಹೀಗೆಯೇ

ಕೊನೆತನಕ ಉಡುಗಿಹೋಗುವುದೇನೋ ಎನ್ನಿಸುತ್ತದೆ. ಆದರೆ ಸಂಜೆಯ ಹೊತ್ತಿಗೆ ಮೋಡಗಳು ಚೆದರುತ್ತವೆ, ಆಕಾಶವು ಶಾಂತವಾಗುತ್ತದೆ. ಹೊಂಬಿಸಿಲು ಮತ್ತೆ ಮಿನುಗುತ್ತದೆ. ಅದುವರೆಗೂ ಸುರಿದು ಬೆದರಿಸಿದ ಮಳೆಯ ತಂಪಿನಿಂದಲೇ ದಿನವು ರಮ್ಯತರವಾಗುತ್ತದೆ, ಉಪಭೋಗಕ್ಷಮವಾಗುತ್ತದೆ. ದುರ್ವಾಸರ ಶಾಪದ ಪರಿಣಾಮವೂ ಹೀಗೆಯೇ. ಅದರ ದೆಸೆಯಿಂದ ದುಷ್ಯಂತ ಶಕುಂತಲೆಯರ ಪ್ರೇಮವು ಇನ್ನೂ ಗಾಢವಾಯಿತು, ಊರ್ಜಿತವಾಯಿತು, ಉದಾತ್ತವಾಯಿತು. ಇದು ಹೇಗೆಂಬುದನ್ನು ವಿವರಿಸುವ ಮೊದಲು ಅವರ ಪುನಸ್ಸಮಾಗಮನವನ್ನು ಕುರಿತು ಹೊರಡಬಹುದಾದ ಇನ್ನೂ ಒಂದೆರಡು ಆಕ್ಷೇಪಣೆಗಳನ್ನು ಪರಿಶೀಲಿಸೋಣ.

ಶಕುಂತಲಾ ಪ್ರಸಂಗದಲ್ಲೇನೋ ದುಷ್ಯಂತನು ನಿರ್ದೋಷಿಯಾಗಿರಬಹುದು. ಆದರೆ ಆಕೆಯ ಕೈಯನ್ನು ಹಿಡಿಯಲು ಅವನು ಎಷ್ಟು ಮಾತ್ರಕ್ಕೂ ಅರ್ಹನಲ್ಲ. ದುರ್ವಾಸರ ಶಾಪವು ಅವನನ್ನು ರಕ್ಷಿಸಿತೆಂದೇ ಹೇಳಬೇಕು. ಅದು ಒಡ್ಡಿದ ವಿರಹ ಪಶ್ಚಾತ್ತಾಪಗಳ ಮೂಲಕವೇ ದುಷ್ಯಂತನು ಶಕುಂತಲೆಯ ಬೆಲೆಯನ್ನು ಅರಿತುಕೊಂಡದ್ದು. ಇಲ್ಲವಾದರೆ ಆತನ ಅಂತಃಪುರವನ್ನಲಂಕರಿಸಿದ್ದ ಹಲಮಂದಿ ರಮಣಿಯರ ನಡುವೆ ಅವಳೂ ಸೇರಿಹೋಗುತ್ತಿದ್ದಳು. ಕೆಲವು ದಿನಗಳಲ್ಲಿ ಅವಳ ಸಹವಾಸದಿಂದಲೂ ದಣಿದು ಬೇರೊಬ್ಬ ಸುಂದರಿಯ ಕಡೆ ದುಷ್ಯಂತನು ತಿರುಗುತ್ತಿರಲಿಲ್ಲವೆಂದು ನಮಗೇನು ಗೊತ್ತು ? ಐದನೆಯ ಅಂಕದ ಆರಂಭದಲ್ಲಿ ಬರುವ ಹಂಸಪದಿಕೆಯ ವೃತ್ತಾಂತವನ್ನು ನೋಡಿ. "ಇದರಿಂದ ಕವಿಯು ದುರ್ವಾಸರ ಶಾಪದಿಂದ ಯಾವುದು ಸಂಘಟಿಸಿತೋ ಅದರ ಬೀಜವು ರಾಜನ ಸ್ವಭಾವದಲ್ಲೇ ಇದೆ ಎಂದು ಅತ್ಯಂತ ಕುಶಲತೆಯಿಂದ ತಿಳಿಸಿರುತ್ತಾನೆ."[12] ಹಿಂದೊಮ್ಮೆ ದುಷ್ಯಂತನು ಹಂಸಪದಿಕೆಯನ್ನು ಒಲಿದಿದ್ದರೂ ಈಗ ಉಪೇಕ್ಷಿಸುತ್ತಿದ್ದಾನೆ. ಅದಕ್ಕಾಗಿ ಅವಳು ಉಪಾಲಂಭನಮಾಡಿದರೆ ಅವಳ ಕೌಶಲವನ್ನು ಮಾತ್ರ ಮೆಚ್ಚಿ ವಿದೂಷಕನ ಸಂಗಡ ಹೇಳಿಕಳಿಸುತ್ತಾನೆ. ತಪೋಮಯಿಯಾದ ಶಕುಂತಲೆಯೊಂದಿಗೆ ಇಂಥ ಚಂಚಲ ನಾಗರಿಕನಿಗೆ ಪುನಸ್ಸಂಘಟನೆಯಾಗಬಹುದೆ ?

ಇಲ್ಲಿ, ಶಾಕುಂತಲದಂಥ ಲೋಕೋತ್ತರವಾದ ನಾಟಕದಲ್ಲಿ ಕೂಡ ಕಾಳಿದಾಸನು ರೂಢಿಯಂತೆ ಉಪನಾಯಿಕೆಯರ ಹೆಸರನ್ನೆತ್ತಿದ್ದು ಅನುಚಿತವೆಂದೇ

[12] 'ಪ್ರಾಚೀನಸಾಹಿತ್ಯ'—ಶಾಕುಂತಲ, ಪು. ೫೭.

ಒಪ್ಪಿಕೊಳ್ಳಬೇಕು. ಹಂಸಪದಿಕೆಯನ್ನೂ ವಸುಮತಿಯನ್ನೂ ರಂಗಸ್ಥಳದ ಮೇಲೆ ತಾರದೆಬಿಟ್ಟ ಎಚ್ಚರಿಕೆಗಾಗಿ ಅವನಿಗೆ ಕೃತಜ್ಞತೆಯನ್ನೂ ಸಲ್ಲಿಸಬೇಕು. ಅವರಿಬ್ಬರ ಮಾತೂ ಬಾರದಿದ್ದರೆ ದುಷ್ಯಂತನು ನಮ್ಮ ದೃಷ್ಟಿಯಲ್ಲಿ ಇನ್ನೂ ಉನ್ನತವಾಗುತ್ತಿದ್ದನು. ಆದರೆ ಇದು ನಮ್ಮ ದೃಷ್ಟಿ—ಆಧುನಿಕ ದೃಷ್ಟಿ—ಎಂಬುದನ್ನು ಮರೆಯಬಾರದು. ಬಹುಪತ್ನೀಕತ್ವವು ನಮಗೆ ಅನುಚಿತವೆನಿಸುವುದರಿಂದ ಪ್ರಾಚೀನ ವೀರರೆಲ್ಲರೂ ನಮ್ಮ ನೋಟದಲ್ಲಿ ಒಂದು ಮೆಟ್ಟಲು ಇಳಿದುಹೋಗುತ್ತಾರೆ. ಆದರೆ ಹಿಂದಿನ ಕಾಲದ ಧರ್ಮ ಹೀಗಿರಲಿಲ್ಲ. ಒಬ್ಬ ರಾಜನಿಗೆ ಹಲವರು ಪತ್ನಿಯರು ಹಲವು ಕಾರಣಗಳಿಂದ—ಎಷ್ಟೋ ವೇಳೆ ರಾಜಕೀಯ ವ್ಯವಹಾರದ ಫಲವಾಗಿ—ಒದಗುತ್ತಿದ್ದರು. ಇಂಥ ಸಮಯದಲ್ಲಿ ಅವನು ಏಕಪತ್ನೀವ್ರತವನ್ನೇ ಹಿಡಿಯಬೇಕೆಂದು ಹಠಮಾಡುವುದು ಯುಕ್ತವಲ್ಲ. ಎಲ್ಲ ಹೆಂಡತಿಯರಲ್ಲೂ ಒಂದೇ ಸಮನಾದ ಅನುರಾಗವನ್ನಿಡುವುದೂ ಅವನಿಗೆ ಸಾಧ್ಯವಲ್ಲ. ಮಿಕ್ಕವರ ವಿಚಾರ ಹೇಗೆ ಇರಲಿ,—ಅವರೊಡನೆಯೂ ದುಷ್ಯಂತನು ದಾಕ್ಷಿಣ್ಯದಿಂದ ವರ್ತಿಸುತ್ತಾನೆ.—ಶಕುಂತಲೆಯ ವಿಷಯದಲ್ಲಿ ಮಾತ್ರ ಅವನ ಸದ್ಭಾವವನ್ನು ಶಂಕಿಸುವುದು ಸರಿಯಾಗಿ ತೋರುವುದಿಲ್ಲ. ಹಂಸಪದಿಕೆಯ ಗೀತವನ್ನು ಕಾಳಿದಾಸನು ತಂದಿರುವುದು[13] ಮುಖ್ಯವಾಗಿ ವಿದೂಷಕನನ್ನು ಜಾಗ ಬಿಡಿಸುವುದಕ್ಕೋಸ್ಕರ; ಶಾಪವು ಸಂಪೂರ್ಣವಾಗಿ ಕವಿದು, ದುಷ್ಯಂತನಿಗೆ ಶಕುಂತಲೆಯ ನೆನಪು ಎಳ್ಳಷ್ಟಾದರೂ ಉಳಿದಿಲ್ಲವೆಂದು ತೋರಿಸುವುದಕ್ಕೋಸ್ಕರ.[14] "ಪ್ರಥಿತಂ ದುಷ್ಯಂತಸ್ಯ ಚರಿತಂ." ಅವನೇ ಶಕುಂತಲೆಗೆ ಅರ್ಹನಲ್ಲದಿದ್ದರೆ ಮತ್ತಾರು ಅರ್ಹರು!

ಮಾರೀಚಾಶ್ರಮದಲ್ಲಿ ತಪೋನಿಷ್ಠೆಯಿಂದ ಕೃಶೆಯಾದ ಶಕುಂತಲೆ ದಿವ್ಯ ತೇಜಸ್ಸಿನ ಕುಡಿಯಾಗಿ ಪರಿಣಮಿಸಿದ್ದಾಳೆ. ಪ್ರೇಮ–ವಿರಹ–ತಿರಸ್ಕಾರ–ಯಾತನೆಗಳಿಂದ ಅವಳು ಶೋಷಿಸಿಹೋಗಿದ್ದರೂ ಅವಳ ಹೃದಯವು ಶೋಧಿಸಿ ಉದಾತ್ತವಾಗಿದೆ. ಆದರೆ ಅವಳ ಮಾನವೀಯತೆ ಮಾತ್ರ ಕುಂದಿಲ್ಲ. ಹೇಮಕೂಟದ ದಿವ್ಯ ಶಿಖರದಲ್ಲಿ ಅವಳು ತನ್ನ ಪತಿಯನ್ನೆದುರುಗೊಳ್ಳುವ ದೃಶ್ಯವನ್ನು ನೋಡಬಹುದು.

---

[13] S. D. and A. B. Gajendragadkar, *Abhijñāna-Śākuntala*, Notes, pp. 224ff.

[14] ಇನ್ನೂ ಒಂದು ಮುಖ್ಯ ಪ್ರಯೋಜನವಿದೆ. ಮುಂದಿನ ಲೇಖನದಲ್ಲಿ ಹಂಸಪದಿಕೆಯ ಪ್ರಸಂಗವನ್ನು ಕುರಿತ ವಾಕ್ಯಗಳನ್ನು ನೋಡಿ.

"ಆರ್ಯಪುತ್ರನಿಗೆ ಜಯವಾಗಲಿ" ಎನ್ನುವಾಗ ಅರ್ಧೋಕ್ತಿಯಲ್ಲಿ ಅವಳ ಕೊರಳ ಸೆರೆ ಬಿಗಿಯುತ್ತದೆ. ದುಷ್ಯಂತನು ತನ್ನನ್ನು ನಿರಾಕರಿಸಿದನೆಂಬ ಕೋಪದಿಂದ ಅವಳು ಎಂದೂ ತನ್ನ ಹೃದಯದಿಂದ ಅವನನ್ನು ಹೊರಕ್ಕೆ ದೂಡಿದವಳಲ್ಲ. ಈ ವೇಳೆಗಾಗಲೆ ಸಾನುಮತಿಯಿಂದ ಅವನ ಉತ್ಕಟ ಪಶ್ಚಾತ್ತಾಪವನ್ನರಿತು ಅವನ ಮೇಲೆ ಅನಂತಕ್ಷಮೆಯನ್ನು ವರ್ಷಿಸಿದ್ದಾಳೆ. ದುಷ್ಯಂತನು ಕೂಡ ತನ್ನಲ್ಲಿ ನಿಜವಾಗಿ ತಪ್ಪಿಲ್ಲದಿದ್ದರೂ ಕಠೋರವಾದ ಪಶ್ಚಾತ್ತಾಪಕ್ಕೊಳಗಾಗಿ ತನ್ನ ಪ್ರೇಮದ ಸ್ವಾರ್ಥವನ್ನು ಸುಟ್ಟಿರುವುದರಿಂದ ಮಡದಿಯ ಮುಂದೆ ನಿಲ್ಲಲು ಅರ್ಹನಾಗಿದ್ದಾನೆ. ಶಕುಂತಲೆ ಅವನನ್ನು ಸ್ವೀಕರಿಸುತ್ತಾಳೆ; ಆದರೆ ನೆಚ್ಚಿಕೆ ಮುರಿದ ಉಂಗುರವನ್ನು ಮಾತ್ರ ಮತ್ತೆ ಸ್ವೀಕರಿಸುವುದಿಲ್ಲ. ಆಹ, ಅವಳು ಇನ್ನೂ ಮಾನಿನಿಯೆ! ಚಿರಕಾಂಕ್ಷಿತವಾದ ಈ ಸಮಾಗಮವು ಸಿದ್ಧಿಸಿದ ಬಳಿಕವೇ ದಂಪತಿಗಳಿಗೆ ಶಾಪದ ನಿಜವೃತ್ತಾಂತ ತಿಳಿಯಬರುವಂತೆ ನಾಟಕವನ್ನು ರಚಿಸಿ ಕಾಳಿದಾಸನು ಅವರ ಪ್ರೇಮದ ಬೇರನ್ನು ಭದ್ರಪಡಿಸಿದ್ದಾನೆ; ಪತಿಸಮಾಗಮದಿಂದ ಶಕುಂತಲೆ ಇಂದು ನಿಜವಾಗಿಯೂ ಸುಖಿ. ಅವಳ ಕಂಬನಿಯನ್ನು ಒರಸಿ ದುಷ್ಯಂತನು ಅವಳ ಸರ್ವಕ್ಲೇಶಗಳನ್ನೂ ಒರಸಿದ್ದಾನೆ.

ದುಷ್ಯಂತ–ಶಕುಂತಲೆಯರಿಬ್ಬರ ದೃಷ್ಟಿಯಿಂದಲೂ ನಾಟಕದ ಸಮಾಪ್ತಿಯ ಮಂಗಳವು ಉಚಿತವಾಗಿದೆಯೆಂದು ನೋಡಿದ್ದಾಯಿತು. ಆದರೆ ಅದು ಅಲೌಕಿಕ ಸಂಘಟನೆಗಳ ಮೂಲಕ ಉಂಟಾಗಿರುವುದರಿಂದ ನಾಟಕದ ವಸ್ತುರಚನೆಗೆ ಬಾಹ್ಯವಾಗಿದೆಯೆ ಎಂದು ವಿಚಾರ ಮಾಡಬೇಕು. ಪುರಾಣಯುಗದ ಕಥೆಗಳಲ್ಲಿ ಅಲೌಕಿಕಾಂಶಗಳು ಬರುವುದೇ ಒಂದು ತಪ್ಪಲ್ಲ; ಅದು ಅನಿವಾರ್ಯವೆಂದೂ ಹೇಳಬಹುದು. ಬಂದಾಗ ಮಾತ್ರ, ಅವು ಕಥೆಗೆ ನೆವಮಾತ್ರಕ್ಕೆ ಅಂಟಿಕೊಂಡಿರಕೂಡದು. ಹಾಸುಹೊಕ್ಕಿನಂತೆ ಅದರೊಡನೆ ಹೆಣೆದುಕೊಂಡಿರಬೇಕು; ಕಥೆಯ ಗತಿಗೂ ಆವರಣಕ್ಕೂ ವಿರುದ್ಧವೆನಿಸಬಾರದು. ಮಹಾಭಾರತದ ಶಾಕುಂತಲೋಪಾಖ್ಯಾನವನ್ನು ಕೊನೆಗಾಣಿಸುವ ಅಲೌಕಿಕ ವಾಣಿಯಲ್ಲಿ ಈ ದೋಷಗಳೆಲ್ಲವೂ ಇರುವುದರಿಂದ ಅದು ಅನುಚಿತವೆಂದೂ ಮೂಲಕಥೆ ನಿಜವಾಗಿ ದುರಂತಕಥೆಯೇ ಎಂದೂ ನಿರ್ಧರಿಸಲಾಯಿತು. ಶಾಕುಂತಲ ನಾಟಕಕ್ಕಾದರೆ ಈ ಮಾತು ತಟ್ಟುವುದಿಲ್ಲ. ಇಲ್ಲಿಯ ಆವರಣವೇ ದೈವ–ಮಾನವ ಸಮನ್ವಯದ ಆವರಣ. ಕಥಾನಾಯಿಕೆಯಾದ ಶಕುಂತಲೆ ಅಪ್ಸರೆಯೊಬ್ಬಳ ಪುತ್ರಿ. ಅವಳ ಸಮಸ್ತ ಸಂಕಟ

ಗಳಿಗೂ ಮೂಲವಾದ ಋಷಿಶಾಪ ತುಂಬ ಅಲೌಕಿಕವಾದ ಸಂಗತಿ. ಸಾಮಾನ್ಯ ಲೌಕಿಕ ಕಾರಣದಿಂದ ದುಷ್ಯಂತನಿಗೆ ಶಕುಂತಲೆಯ ನೆನಪು ಇಷ್ಟು ನಿಯತವಾಗಿ ನಿಶ್ಶೇಷವಾಗಿ ಅಳಿಯುತ್ತಿರಲಿಲ್ಲ; ಅವನ ಚಾರಿತ್ರವು ಅಕಳಂಕಿತವಾಗಿ ನಿಲ್ಲುತ್ತಿರಲಿಲ್ಲ. ಇನ್ನು ಐದನೆಯ ಅಂಕದ ಕೊನೆಯಲ್ಲಿ ಶಕುಂತಲೆಯನ್ನು ಇತ್ತ ದುಷ್ಯಂತನು ನಿರಾಕರಿಸುವನು, ಅತ್ತ ಶಾರ್ಙ್ಗರವನು ಆಶ್ರಮಕ್ಕೆ ಮರಳಬೇಡವೆಂದು ಗರ್ಜಿಸುವನು. ಈ ಕಠೋರ ಪರಿಸ್ಥಿತಿಯಲ್ಲಿ ಪ್ರಸವಕಾಲದವರೆಗೂ ಅವಳು ರಾಜಪುರೋಹಿತನ ಮನೆಯಲ್ಲಿ ನಿಲ್ಲಬೇಕಾದ ದುರವಸ್ಥೆ ಒದಗುವುದು. ಎಂಥ ಸಹನೆಯ ಮೂರ್ತಿಗೂ ಈ ಕೊನೆಯ ವಿಷದ ಗುಳಿಗೆಯನ್ನು ನುಂಗಿಕೊಳ್ಳುವುದು ಅಸಾಧ್ಯ. ಆಗ ಅಲೌಕಿಕಾಶ್ಚರ್ಯವೊಂದು ನಡೆಯುತ್ತದೆ.[15] ಶಕುಂತಲೆಯ ತಾಯಿ ಮೇನಕೆ ಆಕಾಶಗಮನದಿಂದ ಬಂದು ಮಗಳನ್ನು ಅದೃಶ್ಯವಾಗಿ ಕರೆದೊಯ್ಯುತ್ತಾಳೆ. ಮುಂದೆ ದುಷ್ಯಂತನು ಪರಿತಾಪಪಡುವಾಗ ಸಾನುಮತಿ ತನ್ನ ಅಲೌಕಿಕ ಪ್ರಭಾವದಿಂದ ಅದೃಶ್ಯಳಾಗಿ ನಿಂತು ನೋಡಿ, ಆ ವೃತ್ತಾಂತವನ್ನು ಶಕುಂತಲೆಗೆ ಮುಟ್ಟಿಸುತ್ತಾಳೆ. ಇಷ್ಟನ್ನೆಲ್ಲಾ ನಾವು ನೋಡಿದ ಮೇಲೆ, ಇಂದ್ರಸಹಾಯನಾಗಿ ಸ್ವರ್ಗಕ್ಕೆ ಹೋಗಿದ್ದ ದುಷ್ಯಂತನು ಹಿಂದಿರುಗುವಾಗ ದಾರಿಯಲ್ಲಿ ಮಾರೀಚಾಶ್ರಮದಲ್ಲಿಳಿದು ತನ್ನ ಪತ್ನಿಯನ್ನು ಕಂಡನೆಂದರೆ ನಮಗೆ ಯಾವ ಆಶ್ಚರ್ಯವೂ ಆಗುವುದಿಲ್ಲ; ಹಿಂದಿನ ಸಂಘಟನೆಗಳಿಗೆ ಇದು ಅನುರೂಪವೆನಿಸುತ್ತದೆ. ಅಲ್ಲದೆ ದೇವತೆಗಳೂ ದುಷ್ಯಂತ–ಶಕುಂತಲೆಯರ ಪುನಸ್ಸಮಾಗಮನವನ್ನು ಕುರಿತು ಆಲೋಚಿಸುತ್ತಿರುವರೆಂದು ಆಗಲೆ ಸಾನುಮತಿಯಿಂದ ತಿಳಿದುಬಂದಿರುತ್ತದೆ. ಇನ್ನು ಮರ್ತ್ಯವನ್ನು ಸ್ವರ್ಗದಲ್ಲಿ ಪರಿಣಾಮಗೊಳಿಸುವ ಈ ನಾಟಕಕ್ಕೆ ಹೇಮಕೂಟದ ದಿವ್ಯಾಶ್ರಮಕ್ಕಿಂತ ಉಚಿತತರವಾದ ಸಮಾಪ್ತಿಸ್ಥಾನ ಯಾವುದು?

ಮರ್ತ್ಯವನ್ನು ಸ್ವರ್ಗದಲ್ಲಿ ಪರಿಣಾಮಗೊಳಿಸುವುದೆಂದರೇನು? ಇದರ ವಿವರಣೆಗೆ ರವೀಂದ್ರನಾಥರು ತಮ್ಮ ಉಜ್ಜ್ವಲವಾದ ಒಂದು ಉಪನ್ಯಾಸವನ್ನೇ—ಹಿಂದೆ ಉದಾಹರಿಸಿರುವ 'ಕುಮಾರಸಂಭವ ಮತ್ತು ಶಾಕುಂತಲ' ವನ್ನೇ—ಪೂರ್ಣವಾಗಿ ವಿನಿಯೋಗಿಸಿದ್ದಾರೆ. ಅಲ್ಲಿಯ ಒಂದೆರಡು ಅಂಶಗಳನ್ನು ಸೂಚಿಸುವುದು ಮಾತ್ರ ಈಗ ಸಾಧ್ಯ. ದೈಹಿಕವಾಗಿ ಜನಿಸಿದ ಮೋಹವು ಯಾತನೆ ಪಶ್ಚಾತ್ತಾಪಗಳ ಬೆಂಕಿಯಲ್ಲಿ ಪುಟಹೊಂದಿ ಸ್ವಾರ್ಥದ ಕಲ್ಮಷವನ್ನೆಲ್ಲಾ ಕಳೆದು

---

[15] *Abhijñāna-Śākuntala*, Notes, p. 228.

ಕೊಂಡು ಕೊನೆಯಲ್ಲಿ ದೈವಿಕ ಪ್ರೇಮದ—ಆತ್ಮಗಳ ಸಮಾಗಮದ—ಆಪರಂಜಿಯಾಗುತ್ತದೆ. ಇದೇ ಶಾಕುಂತಲ ನಾಟಕದ ಸಾರ. "ಪ್ರಥಮಾಂಕದಲ್ಲಿ ಪ್ರಿಯಳಾದ ಶಕುಂತಳೆಯೊಂದಿಗೆ ದುಷ್ಯಂತನ ವ್ಯರ್ಥ ಪ್ರಣಯವನ್ನೂ ಕಡೆಯ ಅಂಕದಲ್ಲಿ ಭರತಜನನಿಯೊಂದಿಗೆ ಆತನ ಸಾರ್ಥಕ ಸಮ್ಮಿಳನವನ್ನೂ ಕವಿಯು ಚಿತ್ರಿಸಿರುತ್ತಾನೆ."[16] ದುಷ್ಯಂತ-ಶಕುಂತಲೆಯರಿಗೆ ಮೊಟ್ಟಮೊದಲು ಜನಿಸಿದ ಅನುರಾಗವು ಸಹಜವಾಗಿಯೇ ವಿಷಯೋನ್ಮುಖವಾದದ್ದು, ಸ್ವಸುಖಾಪೇಕ್ಷಿಯಾದದ್ದು. ಈ ಪ್ರಣಯಕ್ಕೆ ಹಿನ್ನೆಲೆ ಕಣ್ವರ ಆಶ್ರಮ—ಸಾಕುಮಗಳನ್ನು ಗಂಡನ ಮನೆಗೆ ಕಳಿಸಿಕೊಡುವಾಗ ಸಂಸಾರಿಯಂತೆ ಕಂಬನಿದುಂಬುವ ಕಣ್ವರ ಆಶ್ರಮ. ಮುಂದೆ ಅಗಲಿಕೆಯೊದಗುತ್ತದೆ, ಅಪಾರ ಯಾತನೆಯೊದಗುತ್ತದೆ, ಅಗಾಧ ಪರಿತಾಪವೊದಗುತ್ತದೆ. ಈ ಘರ್ಷಣದಲ್ಲಿ, ಮೀರಿದ ಆಸೆಯೂ ಕಾಮುಪಿಪಾಸೆಯೂ ಕಳಚಿಬಿದ್ದು, ಇಬ್ಬರ ಹೃದಯಗಳಲ್ಲೂ ನೋವಿನ ಕಾವಿನಿಂದ ಹೊಸ ಸತ್ತ್ವವೊಂದು ಅರಳಿ, ಪುನಸ್ಸಮಾಗಮದ ವೇಳೆಗೆ ಇಬ್ಬರೂ ಪರಿಶುದ್ಧರಾಗಿರುತ್ತಾರೆ. ಇವರು ಈಗ ಸೇರುವುದು ಶಾಂತಿಯ ನೆಲೆಯಾದ ಹೇಮಕೂಟಪರ್ವತದಲ್ಲಿ, ದಾಂಪತ್ಯವನ್ನು ವಿಶ್ವದ ದೃಷ್ಟಿಯಲ್ಲಿ ಸಾರ್ಥಕಗೊಳಿಸುವ ತಮ್ಮ ತನಯನ ಸಮ್ಮುಖದಲ್ಲಿ. ಈ ಕೊನೆಯನ್ನು ಗುರಿಯಲ್ಲಿಟ್ಟುಕೊಂಡೇ ಕಾಳಿದಾಸನು ತನ್ನ ನಾಟಕವನ್ನು ರಚಿಸಿದ್ದಾನೆ. ಈ ಉದಾತ್ತ ಭಾವವನ್ನೇ ಅದರಲ್ಲಿ ದಳದಳವಾಗಿ ವಿಕಾಸಗೊಳಿಸಿದ್ದಾನೆ. ಇದರ ಸನ್ನಿಧಿಯಿಂದಲೇ ನಾಟಕದ ಕಟ್ಟಡ ಇಷ್ಟು ಏಕಮುಖವೂ ಅಚಲವೂ ಆಗಿರುವುದು. ಇಲ್ಲಿ ಬಂದಿರುವ ದುರಂತ ಸನ್ನಿವೇಶಗಳೆಲ್ಲವೂ ಕವಿಯ ಆಶ್ರಯಸಾಧನೆಗೆ ಸಮುಚಿತವಾದ ಅಂಗಗಳೇ ಹೊರತು, ತಾವೇ ಸ್ವತಂತ್ರವಾಗಿ ನಿಂತು ಪಟ್ಟಕಟ್ಟಿಸಿಕೊಳ್ಳತಕ್ಕವಲ್ಲ.

೪

ಕಾಳಿದಾಸನ ಪ್ರಥಮ ನಾಟಕ ಮಾಲವಿಕಾಗ್ನಿಮಿತ್ರವೆಂಬುದು ನಿರ್ವಿವಾದವಾದ ವಿಷಯ. ಬಳಿಕ. ವಿಕ್ರಮೋರ್ವಶೀಯವನ್ನು ಮುಂಚೆ ಬರೆದನೆ, ಶಾಕುಂತಲವನ್ನು ಮುಂಚೆ ಬರೆದನೆ? ಈ ಸಮಸ್ಯೆಯನ್ನು ಬಿಡಿಸಲು ಆಂತರಿಕ ಪ್ರಮಾಣಗಳ ಆಧಾರವೊಂದೇ ನಮಗೆ ಗತಿ. ವಿಮರ್ಶಕರ ಅಭಿಪ್ರಾಯಗಳು ಎರಡು

---

16 ಕುಮಾರಸಂಭವ ಮತ್ತು ಶಾಕುಂತಲ, ಪು. ೩೨-೩.

ಕಡೆಗೂ ತೂಗುತ್ತವೆ.[17] ಆದರೆ ವಿಕ್ರಮೋರ್ವಶೀಯವೇ ಮುಂಚೆ ಹುಟ್ಟಿದ್ದೆಂದು ಊಹಿಸಿದರೆ ತಪ್ಪಾಗಲಾರದು.

ಇವೆರಡು ನಾಟಕಗಳಿಗೂ ಸಂವಿಧಾನಗಳಲ್ಲಿ ಎಷ್ಟೊಂದು ಸಾಮ್ಯವಿದೆ![18] ಶಾಪವೃತ್ತಾಂತವೇ ಎರಡರಲ್ಲೂ ಕಥೆಯ ಕೀಲುಗಲ್ಲು ; ವಿಕ್ರಮೋರ್ವಶೀಯದಲ್ಲಿ ಒಂದು ಸಾಲದೆಂದು ಎರಡು ಬರುತ್ತವೆ, ಅಷ್ಟೇ ವ್ಯತ್ಯಾಸ. ಎರಡು ಕಡೆಗಳಲ್ಲೂ ನಾಟಕದ ಕ್ರಿಯೆ ಸ್ವರ್ಗಭೂಮಿಗಳಿಗೆ ಸೇತುವೆ ಕಟ್ಟುತ್ತದೆ ; ದೇವತೆಗಳ ಮಾಧ್ಯಸ್ಥ್ಯವಿಲ್ಲದೆ ಕಥೆ ಕೊನೆಮುಟ್ಟುವ ಹಾಗಿಲ್ಲ. ಮೊದಲ ಅಂಕಗಳಲ್ಲಿ ನಾಯಕನು ರಕ್ಷಕನಂತೆ ನಾಯಿಕೆಯ ಪರಿಚಯಮಾಡಿಕೊಳ್ಳುತ್ತಾನೆ ; ಕೊನೆಯ ಅಂಕಗಳಲ್ಲಿ ಇವರ ಕುಮಾರನ ಮೂಲಕ ಕಥೆಯ ನಿರ್ವಹಣವಾಗುತ್ತದೆ. ನಾಯಿಕೆಯರಲ್ಲಿ ಕೂಡ, ಒಬ್ಬಳು ಅಪ್ಸರೆಯಾದರೆ ಇನ್ನೊಬ್ಬಳು ಅಪ್ಸರೆಯ ಪುತ್ರಿ. ಅವರ ಭಾವಾಭಿನಿವೇಶವು ವ್ಯಕ್ತವಾಗುವ ರೀತಿಯಲ್ಲೂ ತುಂಬ ಹೋಲಿಕೆಯಿದೆ. ಉರ್ವಶಿಯ ಏಕಾವಳೀಹಾರವು ಬಳ್ಳಿಯ ಕವಲಿಗೆ ಸಿಕ್ಕಿಕೊಂಡರೆ ಶಕುಂತಲೆಯ ವಲ್ಕಲದ ಸೆರಗು ಗೋರಂಟಿ ಗಿಡಕ್ಕೆ ಸಿಕ್ಕಿಕೊಳ್ಳುತ್ತದೆ ; ಇದರ ಜೊತೆಗೆ ಅವಳ ಕಾಲಿಗೆ ದರ್ಭೆ ಬೇರೆ ಚುಚ್ಚಿಕೊಂಡಿರುತ್ತದೆ. ಇಬ್ಬರೂ ಪ್ರಣಯಪತ್ರಗಳನ್ನು ರಚಿಸಿ ತಮ್ಮ ಮನೋಗತವನ್ನು ಪ್ರಿಯನಿಗೆ ತಿಳಿಸತಕ್ಕವರು ; ಶಕುಂತಲೆಯ ನಾಚಿಕೆಯನ್ನು ಮುರಿಯಲು ಮಾತ್ರ ಸಖಿಯರ ಪ್ರೋತ್ಸಾಹ ತುಂಬ ಬೇಕಾಗುತ್ತದೆ.

ಹೀಗೆ ಕಥಾರಚನೆಯ ಸಾಧನಗಳಲ್ಲಿ ಹಲವು ಸಮಾನವಾಗಿದ್ದರೂ ಅವುಗಳ ಉಪಯೋಗ ಮಾತ್ರ ಎರಡು ಕಡೆಗಳಲ್ಲೂ ಭಿನ್ನಫಲವನ್ನು ಕೊಟ್ಟಿದೆ. ಇಲ್ಲಿ ಮುಖ್ಯವಾದುವು ದೇವ-ಮಾನವ ಸಂಸರ್ಗ ಮತ್ತು ಶಾಪವೃತ್ತಾಂತ. ಎರಡು ನಾಟಕಗಳಲ್ಲೂ ಕಥಾರಥ ಹರಿಯಬೇಕಾದರೆ ಈ ಎರಡು ಚಕ್ರಗಳೇ ಬೇಕು. ಆದರೆ ಅವುಗಳ ವಿನ್ಯಾಸದ ಅಚಾತುರ್ಯದಿಂದ ವಿಕ್ರಮೋರ್ವಶೀಯವು ಅಂತಃ

---

[17] ರೈಡರ್ ಅವರು ವಿಕ್ರಮೋರ್ವಶೀಯವೇ ಕೊನೆಯ ಕೃತಿಯೆಂದು ಹೇಳುತ್ತಾರೆ; ಕಾಳೆ, ಕೀತ್, ಗಜೇಂದ್ರಗಡ್‌ಕರ್ ಮೊದಲಾದವರು ಶಾಕುಂತಲಕ್ಕೆ ಈ ಸ್ಥಾನವನ್ನು ಸಲ್ಲಿಸುತ್ತಾರೆ.

[18] M. R. Kale, *Vikramorvaśīya*, Introduction, pp. 32 ff. ಹೋಲಿಸಿ.

ಶೂನ್ಯವಾಗಿ ಪರಿಣಮಿಸಿರುವಾಗ, ಅವೇ ಅಂಶಗಳ ಜೋಡಣೆಯಿಂದಲೇ ಶಾಕುಂತಲವು ಜ್ಯೋತಿರ್ಮಯವಾಗಿ ಬೆಳಗುತ್ತಿದೆ. ಇದಕ್ಕೆ ಕವಿಯ ಅನುಭವವಿಕಾಸವೂ ಔಚಿತ್ಯಜ್ಞಾನಪರಿಪಾಕವೂ ಕಾರಣ. ವಿಕ್ರಮೋರ್ವಶೀಯದಲ್ಲಿ ಒದಗುವ ಪ್ರಣಯ ವಿಘ್ನಗಳೆಲ್ಲಾ ಅಲ್ಪಸಾರವಾದವು. ಪುರೂರವನು ಅನ್ಯಸ್ತ್ರೀಯನ್ನು ನೋಡಿದಮಾತ್ರಕ್ಕೇ ಉರ್ವಶಿ ವಿಚಾರವಿಲ್ಲದೆ ಕೋಪಗೊಂಡು ನಡೆದುಬಿಡುವುದೂ ಅವಳನ್ನು ಹುಡುಕಿಕೊಂಡು ಆತನು ಉನ್ಮತ್ತನಂತೆ ಅಲೆಯುವುದೂ ಅವರಿಗಿನ್ನೂ ಹುಡುಗತನವೆಂಬುದನ್ನು ತೋರಿಸುತ್ತದೆ—ಜೀವನದಲ್ಲಿ ಯಾವುದರ ಬೆಲೆ ಎಷ್ಟೆಂಬುದರ ಅರಿವು ಅವರಿಗೆ ಇಲ್ಲವೆಂದು ವ್ಯಕ್ತಪಡಿಸುತ್ತದೆ. ಹೋಗಲಿ ; ಕ್ಲೇಶಪಟ್ಟರೂ ಅದರಿಂದ ಅವರ ಹೃದಯಗಳಿಗೆ ಯಾವ ಉತ್ತಮ ಸಂಸ್ಕಾರವೂ ಆದಂತೆ ನಮಗೆ ತೋರುವುದಿಲ್ಲ. ಉದಾಹರಣೆಗೆ, ಉರ್ವಶಿ ಮೊದಲು ಹೇಗಿದ್ದಳೋ ಕೊನೆಗೂ ಹಾಗೆಯೇ ನಿಲ್ಲುತ್ತಾಳೆ. ಕಾಳಿದಾಸನು ಅಪ್ರತಿಮ ಪ್ರತಿಭಾಶಾಲಿಯೆನ್ನುವುದು ನಿಜ ; ಅವನ ಕಾವ್ಯವಾಹಿನಿ ನಿರರ್ಗಳವೆನ್ನುವುದೂ ನಿಜ. ಆದರೆ ಈ ಬಗೆಯ ಪ್ರಣಯಕ್ಕಿಂತ ಹೆಚ್ಚು ತೂಕವಾದದ್ದನ್ನು, ಈ ಬಗೆಯ ಪ್ರಣಯಿಗಳಿಗಿಂತ ಹೆಚ್ಚು ಸತ್ತ್ವಶಾಲಿಗಳನ್ನು, ಸೃಷ್ಟಿಸುವ ಶಕ್ತಿ ಅವನಿಗಿನ್ನೂ ಆಗ ಒದಗಿರಲಿಲ್ಲವೇನೋ. ಅಂತೂ ವೈದಿಕ ಕಥೆಯ ಭಾವ ಇವನ ನಾಟಕದ ಜರಡಿಯಲ್ಲಿ ಸೋರಿಹೋಯಿತು.

ಶಾಕುಂತಲವನ್ನು ರಚಿಸುವ ವೇಳೆಗೆ ಅವನ ಕಲೆ ಪರಿಣತವಾಗಿತ್ತು, ಅನುಭವವು ಗಾಢವಿಶಾಲವಾಗಿತ್ತು, ಜೀವನದ ತಿರುಳು ಅವನಿಗೆ ಕರಗತವಾಗಿತ್ತು. ಆದ್ದರಿಂದ ಅವನ ಕುಲುಮೆಗೆ ಬಿದ್ದ ಶಾಕುಂತಲೋಪಾಖ್ಯಾನಕ್ಕೆ ಅಭೂತಪೂರ್ವವಾದ ಹೊಸಕಳೆ ಬಂದಿತು. ಅದು ದುರಂತನಾಟಕವಾಗಿದ್ದರೆ ಎಷ್ಟು ಅರ್ಥವತ್ತಾಗಬಹುದೋ ಅದಕ್ಕೆ ಹತ್ತುಪಟ್ಟು ಫಲವು ಮಂಗಳಾಂತದಿಂದ ಲಭಿಸಿತು. ಕಾಳಿದಾಸನು ವಿಚಾರಪೂರ್ವಕವಾಗಿ ದುರಂತತೆಯನ್ನು ನಿರಾಕರಿಸಿದನೆಂದು ಈ ಮಾತಿನ ಅಭಿಪ್ರಾಯವಲ್ಲ. ಅವನ ಕೃತಿಗಳನ್ನು ಪಕ್ಷಪಾತವಿಲ್ಲದೆ ವಿಮರ್ಶಿಸಿದರೆ, ಅವನಿಗೆ ದುರಂತ ದೃಷ್ಟಿ ಇರಲಿಲ್ಲವೆಂಬ ನಿರ್ಣಯವು ಸಿದ್ಧಿಸತಕ್ಕ ಸಂಭವವೇ ಹೆಚ್ಚು. ಇದಕ್ಕೆ ಸಂಸ್ಕೃತ ನಾಟಕ ಸಂಪ್ರದಾಯವು ಕಾರಣವೆಂದರೂ, ಅವನಲ್ಲೂ ಇದೊಂದು ಕೊರತೆಯೇ ; ಇದರ ದೆಸೆಯಿಂದಲೇ ವಿಕ್ರಮೋರ್ವಶೀಯವು ಅಸಮರ್ಪಕವಾದದ್ದು. ಆದರೆ ಕವಿಗೆ ಇರುವುದು ಒಂದೇ ಕಣ್ಣಲ್ಲ ಎಂಬುದನ್ನೂ ನಾವು

ಮರೆಯಬಾರದು. ಜೀವನದ ಆಳವೂ ಘನತೆಯೂ ರಹಸ್ಯವೂ ಮಂಗಳಾಂತ ನಾಟಕಗಳಲ್ಲೂ ಚೆನ್ನಾಗಿ ವ್ಯಕ್ತವಾಗಬಹುದು. ತಾನು ಆರಿಸಿಕೊಂಡ ವಸ್ತುವಿಗೆ ಯಾವ ದೃಷ್ಟಿ ಒಪ್ಪುತ್ತದೋ ಅದನ್ನೇ ಕವಿ ಅವಲಂಬಿಸುವುದು ಅಗತ್ಯ. ಸಾಹಿತ್ಯ ಪ್ರಪಂಚದಲ್ಲಿ ಯಾವ ಕೃತಿಯ ಘನತೆಯನ್ನೇ ಆಗಲಿ, ಅದರ ಉನ್ನತ ಸತ್ತ್ವದಿಂದಲೂ ಏಕಮುಖತೆಯಿಂದಲೂ ನಿರ್ಧರಿಸಬೇಕು. ಈ ಬಗೆಯ ಪರೀಕ್ಷೆಯಿಂದ ಕಾಳಿದಾಸನ ಶಾಕುಂತಲ ನಾಟಕ ಎಷ್ಟುಮಾತ್ರಕ್ಕೂ ಹಿಂಜರಿಯಬೇಕಾಗಿಲ್ಲ.

## ಪರಿಶಿಷ್ಟ

ಶಾಕುಂತಲ ನಾಟಕಕ್ಕೆ ಮಹಾಭಾರತದ ಶಾಕುಂತಲೋಪಾಖ್ಯಾನವೇ ಮೂಲವೆಂದು ಸಾಮಾನ್ಯವಾದ ಅಭಿಪ್ರಾಯ; ಅದನ್ನೇ ಇಲ್ಲಿ ಅಂಗೀಕರಿಸಲಾಗಿದೆ. ಆದರೆ ಇದನ್ನು ಒಪ್ಪದವರೂ ಉಂಟು.[19] ಬಂಗಾಳದಲ್ಲಿ ಪ್ರಚುರವಾಗಿರುವ 'ಪದ್ಮಪುರಾಣ' ದ ಮಾತೃಕೆಗಳಲ್ಲಿ ಶಾಕುಂತಲೋಪಾಖ್ಯಾನದ ಬೇರೊಂದು ಪಾಠ ದೊರೆಯುತ್ತದೆ. ಪ್ರೊ. ಎಚ್. ಶರ್ಮಾ ಎಂಬವರು, *'Padmapurāṇa and Kālidāsa'* ಎಂಬ ಗ್ರಂಥದಲ್ಲಿ ಇದನ್ನು ಪರಿಷ್ಕರಿಸಿ ಪ್ರಕಟಿಸಿದ್ದಾರೆ. ಇದರ ಕಥೆಗೂ ಕಾಳಿದಾಸನ ನಾಟಕಕ್ಕೂ ತುಂಬ ಸಾಮ್ಯ ಉದ್ದಕ್ಕೂ ಕಾಣಬರುತ್ತದೆ. ಅವುಗಳಲ್ಲಿ ಬಹು ಮುಖ್ಯವಾದದ್ದು ದುರ್ವಾಸರ ಶಾಪ. ಇದರ ಫಲವಾಗಿಯೇ ಶಕುಂತಲೆಯ ನಿರಾಕರಣೆ. ಬೆಸ್ತರವನಿಂದಲೇ ಉಂಗುರ ದೊರೆಯುತ್ತದೆ. ಮಾರೀಚಾಶ್ರಮದಲ್ಲೇ, ಭರತಕುಮಾರನ ಮೂಲಕವೇ ದಂಪತಿಗಳ ಸಮಾಗಮ. ಶಾಕುಂತಲದ ಪ್ರಿಯಂವದೆ ಶಾಙ್ಗ್ರರವ (=ಸಂಗಿವರ) ಶಾರದ್ವತಾದಿಗಳು ಇಲ್ಲಿಯೂ ಕಣ್ಣಿಗೆ ಬೀಳುತ್ತಾರೆ. ಇನ್ನೂ ಹಲವು ಸಾಮ್ಯಗಳಿವೆ.—ಈ ಕಥೆಯೇ ಕಾಳಿದಾಸನಿಗೆ ಮೂಲವಸ್ತುವಾಗಿರಬೇಕೆಂದು ಪ್ರೊ. ಶರ್ಮರೂ ಅವರ ಗುರುಗಳಾದ ಡಾ. ವಿಂಟರ್‌ನಿಟ್ಸ್ ಅವರೂ (ಮುನ್ನುಡಿಯಲ್ಲಿ) ಅಭಿಪ್ರಾಯಪಡುತ್ತಾರೆ.

ಪದ್ಮಪುರಾಣದ ಕಾಲವು ಅನಿಶ್ಚಿತವೆಂಬುದು ನಿಜ. ಆದರೂ ಈ ಕಥೆ ಕಾಳಿದಾಸನಿಗೆ ಮಾತೃಕೆಯಾಗುವಷ್ಟು ಪ್ರಾಚೀನವಲ್ಲವೆಂದು ತೋರುತ್ತದೆ. ಉದಾ

---

[19] M. Winternitz, *A History of Indian Literature*, Vol. 1, P. 376.

ಹರಣೆಗೆ, ಮಹಾಭಾರತದಲ್ಲೂ ಮಿಕ್ಕ ಹಲವು ಪುರಾಣಗಳಲ್ಲೂ ಬರುವ[20]

ಭಸ್ತ್ರಾ ಮಾತಾ ಪಿತುಃ ಪುತ್ರಃ ಯೇನ ಜಾತಃ ಸ ಏವ ಸಃ ।
ಭರಸ್ವ ಪುತ್ರಂ ದುಃಷಂತ ಮಾವಮಂಸ್ಥಾಃ ಶಕುಂತಲಾಮ್ ॥
ರೇತೋಧಾಃ ಪುತ್ರ ಉನ್ನಯತಿ ನರದೇವ ಯಮಕ್ಷಯಾತ್ ।
ತ್ವಂ ಚಾಸ್ಯ ಧಾತಾ ಗರ್ಭಸ್ಯ ಸತ್ಯಮಾಹ ಶಕುಂತಲಾ ॥[21]

ಎಂಬೀ ಅನುವಂಶ ಶ್ಲೋಕಗಳು—ಆಕಾಶವಾಣಿಯ ವಾಕ್ಯಗಳು—ಪದ್ಮ ಪುರಾಣದ ಪಾಠದಲ್ಲಿ ಬರುವುದಿಲ್ಲ. ಶಾಕುಂತಲೋಪಾಖ್ಯಾನದಲ್ಲಿ ಇವು ಪ್ರಾಚೀನ ಭಾಗ, ಬಹು ಮುಖ್ಯವಾದ ಭಾಗ. ಆದರೆ ಆಕಾಶವಾಣಿಯ ಪ್ರಸಕ್ತಿಯೇ ಪದ್ಮ ಪುರಾಣದಲ್ಲಿ ಇಲ್ಲ. ಇದನ್ನು ನೋಡಿದರೆ ಕಾಳಿದಾಸನ ಶಾಕುಂತಲವನ್ನು ನೋಡಿ ಕೊಂಡು ಈ ಪುರಾಣಕರ್ತನು ತನ್ನ ಕಥೆಯನ್ನು ಬದಲಾಯಿಸಿರಬೇಕೆಂದು ತೋರುತ್ತದೆ. (ಕಾಳಿದಾಸನೇ ತನ್ನ ಕಥೆಯ ಸೂಕ್ಷ್ಮಾಂಶಗಳಿಗೂ ಇವನನ್ನು ಬೇಡಿದನೆಂದು ನಂಬುವುದು ಕಷ್ಟ.) ಅಲ್ಲದೆ ಪುರಾಣತ್ವವನ್ನು ಉಳಿಸಿಕೊಳ್ಳಲು ಇವನು ಮಹಾಭಾರತದಿಂದಲೂ ಹಲವು ಅಂಶಗಳನ್ನು ತೆಗೆದುಕೊಂಡಿದ್ದಾನೆ. ಇದರಿಂದ ಕಥೆಯಲ್ಲಿ ಅಸನ್ವಯಗಳು ಅಲ್ಲಲ್ಲೇ ದೊರೆಯುತ್ತವೆ.

ಅಂತೂ, ಈ ವಾದದ ನಿರ್ಣಯ ಹೇಗೆ ಪರಿಣಮಿಸಿದರೂ ಶಾಕುಂತಲ ನಾಟಕದ ಮಹತ್ತ್ವಕ್ಕೂ ಸಮರ್ಪಕತೆಗೂ ಯಾವ ಆಕ್ಷೇಪಣೆಯೂ ತಟ್ಟಲಾರದು. ನಮಗೆ ಪ್ರಕೃತವಾದದ್ದು ಅಷ್ಟೆ.

---

[20] Ibid., P. 377, n.l.

[21] ಮಹಾಭಾರತ (ಭಂಡಾರ್‌ಕರ್ ಪ್ರಾಚ್ಯ ಸಂಶೋಧನ ಸಂಸ್ಥೆಯ ಪರಿಷ್ಕರಣ)—ಆದಿಪರ್ವ, ೬೯, ೨೯–೩೦ ಮತ್ತು ೯೦. ೩೧–೩೨.

# 'ಶಾಕುಂತಲ'ವನ್ನು ಕುರಿತು

ವಿಶ್ವಕವಿಗಳ ವಿರಳಪಂಕ್ತಿಯಲ್ಲಿ ಕಾಳಿದಾಸನಿಗೆ ಭದ್ರವಾದ ಸ್ಥಾನವನ್ನು ಗಳಿಸಿಕೊಟ್ಟಿರುವ ಕೃತಿ 'ಅಭಿಜ್ಞಾನ ಶಾಕುಂತಲ'. "ಕಾವ್ಯೇಷು ನಾಟಕಂ ರಮ್ಯಂ ತತ್ರ ರಮ್ಯಾ ಶಕುಂತಲಾ"—ಎಂದು ಹೇಳಿ ಭರತಖಂಡದ ಪಂಡಿತರು ಸಂಸ್ಕೃತ ಸಾಹಿತ್ಯದಲ್ಲಿ ಶಾಕುಂತಲ ನಾಟಕಕ್ಕೆ ಅಗ್ರಪಟ್ಟವನ್ನು ಕಟ್ಟಿದರು. ಪಾಶ್ಚಾತ್ಯರಲ್ಲಿ ಗಯಟೆಯಂಥ ಮಹಾಕವಿ ಮರ್ತ್ಯಸ್ವರ್ಗಗಳ ಸಾರಸಮ್ಮಿಳನವನ್ನೇ ಶಾಕುಂತಲವೆಂಬ ಒಂದು ಹೆಸರಿನಲ್ಲಿ ಕಂಡನು. ಎಷ್ಟೋ ಉತ್ತಮ ಕೃತಿಗಳನ್ನು ಕೂಡ ಒಂದು ಬಾರಿ ಸವಿನೋಡಿದ ಮೇಲೆ ಮತ್ತೆ ಕೈಗೆ ತೆಗೆದುಕೊಳ್ಳಲು ಬೇಗ ಮನಸ್ಸು ಬರುವುದಿಲ್ಲ. ಆದರೆ ಶಾಕುಂತಲವನ್ನು ಓದಿದಷ್ಟೂ ಅದರ ಸವಿ ಹೆಚ್ಚುತ್ತದೆ; ನಮ್ಮ ಅನುಭವ ಆಳವಾದ ಹಾಗೆಲ್ಲ ಅದರ ಅರ್ಥವೂ ಅಭಿನವವಾಗುತ್ತದೆ. ತರುಣರಿಗೆ, ಪರಿಣತರಿಗೆ—ಎಲ್ಲರಿಗೂ ಇದರಲ್ಲಿ ಆಹ್ಲಾದವುಂಟು, ಆತ್ಮಸಂಸ್ಕಾರವುಂಟು. ಇಂಥ ಮಹಾಕೃತಿಯ ಸ್ವಾರಸ್ಯ ಮಹತ್ತ್ವಗಳನ್ನು ಸುಮಾರು ಹತ್ತು ನಿಮಿಷಕಾಲದ ಹರಟೆಯಲ್ಲಿ ನಿರೂಪಿಸುವುದು ಹೇಗೆ ಸಾಧ್ಯ! ಕಡಲನ್ನು ಕಡೆಯುವ ಸಾಹಸಕ್ಕೆ ಇಲ್ಲಿ ನಾನು ಕೈಹಾಕುವುದಿಲ್ಲ. ಶಾಕುಂತಲವು ಶಕುಂತಲಾ–ದುಷ್ಯಂತರ ಪ್ರೇಮಕಥೆ; ಈ ಎರಡು ಪಾತ್ರಗಳ ವಿಷಯದಲ್ಲಿ, ಅದರಲ್ಲೂ ಮುಖ್ಯವಾಗಿ ಶಕುಂತಲೆಯ ವಿಷಯದಲ್ಲಿ, ಗಮನಾರ್ಹವೆಂದು ತೋರಿದ ಕೆಲವು ಅಂಶಗಳನ್ನು ಪ್ರಸ್ತಾವಿಸುವುದಷ್ಟೇ ನನ್ನ ಉದ್ದೇಶ.

ಕಾಳಿದಾಸನು ತನ್ನ ಮಿಕ್ಕ ನಾಟಕಗಳಲ್ಲಿ ಮಾಳವಿಕೆ, ಉರ್ವಶಿ, ಧಾರಿಣಿ, ಇರಾವತಿ ಮೊದಲಾದ ಅನೇಕ ಮಂದಿ ನಾಯಿಕೆ ಉಪನಾಯಿಕೆಯರನ್ನು ನಿರ್ಮಿಸಿದ್ದಾನೆ. ಆದರೆ ಈ ಉಳಿದವರ ಬಗೆಯೇ ಬೇರೆ, ಶಕುಂತಲೆಯ ಬಗೆಯೇ ಬೇರೆ. "ಸ್ತ್ರೀರತ್ನಸೃಷ್ಟಿರಪರಾ ಪ್ರತಿಭಾತಿ ಸಾ ಮೇ" ("ಬೇರೆ ತೋರ್ಕುಮೆನಗೀ ಸ್ತ್ರೀರತ್ನಸೃಷ್ಟಿಕ್ರಮಂ")! ಪಟ್ಟಣದ ಚದುರೆಯರ, ಅರಮನೆಯ ವಿಲಾಸಿನಿಯರ ಬೆಡಗುಬಿನ್ನಾಣಗಳನ್ನು ಕಾಳಿದಾಸನು ಜೀವನದಲ್ಲಿ ಕಂಡು, ನಾಟಕಗಳಲ್ಲಿ ಚಿತ್ರಿಸಿ, ದಣಿದು ಈ ತಪೋವನದ ಮುಗ್ಧೆಯನ್ನು ನಿರ್ಮಿಸಿದಂತೆ ತೋರುತ್ತದೆ. "ದೂರೀಕೃತಾಃ ಖಲು ಗುಣೈರುದ್ಯಾನಲತಾ ವನಲತಾಭಿಃ" ('ದೂರಕಿಕ್ಕಿದುವೈಸೆ ಗುಣದಲಿ ವನಲತೆಗಳುದ್ಯಾನಲತೆಗಳನು')!

ಒಬ್ಬ ರಾಜರ್ಷಿ ಅಪ್ಸರೆಯೊಬ್ಬಳ ಸೊಬಗಿಗೆ ಮರುಳಾಗಿ ವ್ರತ ಭ್ರಷ್ಟನಾದದ್ದರ ಫಲವಾಗಿ ಶಕುಂತಲೆ ಜನಿಸಿದ್ದು ನಿಜ. ಆದರೆ ಚಾಂಚಲ್ಯದ ಸೋಂಕು ಅವಳಿಗೆ ಅಷ್ಟಕ್ಕೇ ಮುಗಿಯಿತು. ಹುಟ್ಟಿದ ಕೂಡಲೆ ಹೆತ್ತವರು ತೊರೆದರು; ಅವಳು ಕಣ್ವರ ಸಾಕುಮಗಳಾಗಿ ಪ್ರಕೃತಿಯ ಮಡಿಲಿನಲ್ಲಿ ಬೆಳೆದಳು. ಆಶ್ರಮದ ಶಾಂತಸರಳ ಜೀವನದೊಂದಿಗೆ ಅವಳ ಬಾಳು ಬೆರೆಯಿತು; ಅದರೊಂದಿಗೆ ಸಮರಸವಾಗಿ ಹರಿಯಿತು. ಋಷಿಕನ್ಯೆಯರಾದ ಅನಸೂಯೆ ಪ್ರಿಯಂವದೆಯರು ಅವಳ ಜೀವದ ಗೆಳತಿಯರು; ತನ್ನಂತೆಯೇ ತಾಯಿಯ ಆರೈಕೆಯನ್ನು ಅರಿಯದ ದೀರ್ಘಾಪಾಂಗವೆಂಬ ಜಿಂಕೆಯ ಮರಿ ಅವಳ ಮುದ್ದಿನ ಕಂದ; ತಾನು ನೀರೆರೆದು ಬೆಳಸಿದ ವನಜ್ಯೋತ್ಸ್ನೆಯೆಂಬ ಲತೆ ಅವಳ ತಂಗಿ. ಕಣ್ವರ ಆಶ್ರಮದಲ್ಲಿ ಶಕುಂತಲೆಯೂ ಒಂದು ಜಂಗಮಲತೆ.

ಈ ನಡೆದಾಡುವ ಬಳ್ಳಿಯಲ್ಲಿ ಯೌವನಕುಸುಮವು ಅರಳಿದವೇಳೆಗೆ, ದುಷ್ಯಂತ ಮಹಾರಾಜನು ಬೇಟೆಯ ನಿಮಿತ್ತದಿಂದ ಇತ್ತ ಬಂದನು. ತುಂಬಿಯಂತೆ ಈ ಹೂವಿಗೆ ಮನಸೋತನು. ಕಾಡಾನೆಯಂತೆ ಶಕುಂತಲೆಯ ಹೃದಯವನ್ನು ಹೊಕ್ಕು ಅಲ್ಲಿಯ ಶಾಂತಿಯನ್ನು ಕದಡಿ "ತಪೋವನವಿರೋಧಿಯಾದ ವಿಕಾರ"ವನ್ನು ಉಂಟುಮಾಡಿದನು. ಹೀಗೆ ಇಬ್ಬರಲ್ಲೂ ಹಬ್ಬಿದ ಅನುರಾಗವು ಹೇಗೆ ಪರಿಣಮಿಸಿತೆಂಬುದೇ ಶಾಕುಂತಲ ನಾಟಕದ ವಸ್ತು.

ಶಕುಂತಲೆಯಲ್ಲಿ ಭಾವ ತೀವ್ರ; ಮಾತು ಮಿತ. ಇಷ್ಟು ಕೊಂಚ ಮಾತಾಡುವ, ಆದರೂ ಸ್ವಭಾವದ ಸೌರಭದಿಂದ ನಾಟಕವನ್ನೆಲ್ಲಾ ತುಂಬುವ ನಾಯಿಕೆಯರು ಕಾವ್ಯಪ್ರಪಂಚದಲ್ಲಿ ಹಲವರಿಲ್ಲ. ಹೆಣ್ಣಿನಲ್ಲಿ ಮಾತು ಸ್ವಲ್ಪವಾದರೇ ಸೊಗಸು ಹೆಚ್ಚೆಂದು ಬಲ್ಲವರ ಹೇಳಿಕೆ. ಅಂತೂ, ತನ್ನ ಸಖಿಯರು ಹಾಸ್ಯಮಾಡಿದಾಗ ಶಕುಂತಲೆ ಕೋಪಿಸಿಕೊಳ್ಳಬಲ್ಲಳೇ ಹೊರತು ಪ್ರತ್ಯುತ್ತರ ಕೊಡಲಾರಳು. ಪುಷ್ಪರಾಶಿಯಲ್ಲಿ ಬಿದ್ದ ಕೆಂಡದಂತೆ ಪ್ರೇಮವು ತನ್ನ ಹೃದಯವನ್ನು ದಹಿಸಿ ಶರೀರವನ್ನು ಶೋಷಿಸುತ್ತಿದ್ದರೂ, ಅವಳು ತನ್ನ ಅಂತರಂಗದ ಗುಟ್ಟನ್ನು ಪ್ರಾಣಸಖಿಯರಿಗೆ ಕೂಡ ಬಾಯಿಬಿಟ್ಟು ಹೇಳಲಾರಳು. ಮುಂದೆ ಸಖಿಯರ ಸಹಾಯದಿಂದ ತನ್ನ ನಲ್ಲನೊಡನೆ ಏಕಾಂತದಲ್ಲಿರಲು ಸಾಧ್ಯವಾದಾಗಲೂ ಚಾತುರ್ಯದ ಮಾತೆರಡನ್ನು ಆಡಲಾರಳು. ಚತುರೋಕ್ತಿ ಎಲ್ಲಿ ಬಂತು!—ಪ್ರೇಮದ ಉದ್ರೇಕದಲ್ಲಿ ಪ್ರಿಯನು ಎಲ್ಲಿ ಮರ್ಯಾದೆಯನ್ನು ಮೀರುವನೋ ಎಂಬ ಆತಂಕ

ಅವಳಿಗೆ. "ಪೌರವ, ವಿನಯವನ್ನು ಕಾಪಾಡಿಕೊ. ಮದನ ಬಾಧೆಗೆ ಒಳಗಾಗಿದ್ದರೂ ನಾನು ಸ್ವತಂತ್ರಳಲ್ಲ" ಎಂದು ಅವನನ್ನು ತಡೆಯುವಳು. ಗಾಂಧರ್ವ ವಿವಾಹವು ಧರ್ಮಸಮ್ಮತವೆಂದು ಅವನು ಸ್ಥಾಪಿಸಿದರೂ ಅವಳ ಮನಸ್ಸಿನ ಶಂಕೆ ಶಮನವಾಗದು. ಪ್ರಾಣಪ್ರಿಯನನ್ನು ಕೂಡುವುದಕ್ಕೆ ಅವಳ ಸಂಕೋಚದ ಸ್ವಭಾವವೇ ಎಲ್ಲಕ್ಕೂ ಹೆಚ್ಚಿನ ಅಡ್ಡಿ. ಆದರೆ ಉದ್ದಾಮ ಪ್ರೇಮವನ್ನು ಎಷ್ಟು ಕಾಲ ತಡೆಗಟ್ಟಲಾದೀತು ? ಇಬ್ಬರ ಹಂಬಲಿಕೆಯೂ ಫಲಿಸಿತು. ದುಷ್ಯಂತ ಶಕುಂತಲೆಯರು ದಂಪತಿಗಳಾದರು.

ಹಲವು ಪ್ರೇಮಕಥೆಗಳು ಮದುವೆಯಲ್ಲಿ ಮುಕ್ತಾಯಹೊಂದುತ್ತವೆ. ಮುಂದೆ ಎಂದೆಂದಿಗೂ ನಲ್ಲನಲ್ಲೆಯರು ಸುಖವಾಗಿದ್ದುಬಿಡುತ್ತಾರೆಂದೇ ಸಾಮಾನ್ಯ ಭಾವನೆ. ಆದರೆ ಜೀವನದಲ್ಲಿ ಎಷ್ಟೋ ವೇಳೆ ಆ ಬಳಿಕವೇ ಕಥೆ ಬೆಳೆಯುವುದು, ನೋವು ನಲವು ಬಲಿಯುವುದು. ತಾರುಣ್ಯದ ಅನುರಾಗವು ವಿರಹದ ಪೆಟ್ಟಿಗೆ ಸಿಕ್ಕಿ, ಕ್ಲೇಶ ಪರಿತಾಪಗಳ ಕುಲುಮೆಯಲ್ಲಿ ಕರಗಿ ಪುಟಹೊಂದಿ, ಅಂತಃಸತ್ತ್ವವಿದ್ದ ಪಕ್ಷದಲ್ಲಿ ಕೊನೆಗೆ ಅಪರಂಜಿಯಾಗುತ್ತದೆ. ಶಾಕುಂತಲ ನಾಟಕದ ಉತ್ತರ ಭಾಗದಲ್ಲಿ ಈ ಕಥೆ ಅನ್ಯಾದೃಶವಾಗಿ ರೂಪುಗೊಂಡಿದೆ.

ಶಕುಂತಲೆಯನ್ನು ಅವಳ ನಲ್ಲನು ಬೀಳ್ಕೊಂಡ ದಿವಸವೇ, ಅವನ ಚಿಂತೆಯಲ್ಲಿ ಮುಳುಗಿ ಅವಳು ವಿಶ್ವವನ್ನೇ ಮರೆತಿದ್ದ ಘಳಿಗೆಯಲ್ಲಿಯೇ, ಕಣ್ವಾಶ್ರಮಕ್ಕೆ ಅತಿಥಿಯಾಗಿ ಮುನಿಸಿನ ಮೂರ್ತಿಯಾದ ದುರ್ವಾಸನು ಬರಬೇಕೆ ! ತನ್ನ ಕೂಗಿಗೆ ಶಕುಂತಲೆ ಉತ್ತರ ಕೊಡಲಿಲ್ಲವೆಂಬ ಕ್ಷುದ್ರ ಕಾರಣವನ್ನೇ ಈ ಮುನಿ ದೊಡ್ಡದು ಮಾಡಿಕೊಂಡು, ಅವಳನ್ನು ದುಷ್ಯಂತನು ಸಂಪೂರ್ಣವಾಗಿ ಮರೆತುಬಿಡುವಂತೆ ಶಾಪಕೊಡಬೇಕೆ ! ಶಕುಂತಲೆಯ ಕಿವಿಗೆ ಬೀಳದ ಅವನ ಗರ್ಜನೆ ಅವಳ ಸಖಿಯರ ಎದೆಯನ್ನು ತಲ್ಲಣಗೊಳಿಸಿತು. ಪ್ರಿಯಂವದೆ ಅನುನಯದ ಸವಿನುಡಿಗಳನ್ನಾಡಿ, ಶಾಪಕ್ಕೆ ಪರಿಹಾರವೊಂದನ್ನು ಋಷಿಯ ಬಾಯಿಂದ ಹೇಳಿಸಿದಳು. ಆದರೆ ಶಕುಂತಲೆಗೆ ದುಃಖ ತಟ್ಟುವುದೇನೂ ತಪ್ಪಲಿಲ್ಲ. "ನವಮಾಲಿಕಾಲತೆಗೆ ಬಿಸಿನೀರನ್ನು ಯಾರುತಾನೆ ಎರೆದಾರು !" ಎಂದುಕೊಂಡು, ಶಾಪದ ವಿಷಯವನ್ನು ಅವಳಿಗೆ ಹೇಳಲು ಸಖಿಯರು ಹಿಂಜರಿದುದ್ದರಿಂದ ಪರಿಸ್ಥಿತಿ ಕಠಿನತರವಾಯಿತು. ಅಂತೂ, ಶಕುಂತಲೆಯನ್ನು ಅಗಲಿದಾಗ ಅವಳ ಬೆರಳಿಗೆ ತನ್ನ ಮುದ್ರೆಯುಂಗುರ ವಿಟ್ಟು, ಅದರಲ್ಲಿ ಕೆತ್ತಿದ್ದ ತನ್ನ ಹೆಸರಿನ ಅಕ್ಷರಗಳನ್ನು ಅವಳು ದಿನಕ್ಕೆ ಒಂದೊಂದ

ರಂತೆ ಎಣಿಸಿ ಮುಗಿಸುವುದರೊಳಗೆ ಅವಳನ್ನು ರಾಜಧಾನಿಗೆ ಕರೆದುಕೊಂಡು ಹೋಗಲು ಪರಿಜನರು ಬರುವರೆಂದು ಮಾತುಕೊಟ್ಟು, ಊರಿಗೆ ತೆರಳಿದ ದುಷ್ಯಂತನ ನೆನಪಿಗೆ ದಾರಿಯಲ್ಲೇ ಕತ್ತಲೆ ಕವಿಯಿತು. ಶಕುಂತಲೆಯ ಸುಖದ ಬಳ್ಳಿ ಅವಳ ಅರಿವಿಲ್ಲದೆಯೇ ಅಲ್ಲಿಗೇ ಮುರುಟಿತು.

ದುರ್ವಾಸನ ಶಾಪದ ಭೀಷಣ ಪರಿಣಾಮವನ್ನು ಕಾಳಿದಾಸನು ಒಡನೆಯೇ ವ್ಯಕ್ತಗೊಳಿಸುವುದಿಲ್ಲ. ಅದಕ್ಕೆ ಮೊದಲು, ನಾಲ್ಕನೆಯ ಅಂಕದಲ್ಲಿ ಒಂದು ಸುಕುಮಾರ ಸಂದರ್ಭವನ್ನು ಚಿತ್ರಿಸಿ ಶಿರೀಷ ಕೋಮಲೆಯಾದ ಶಕುಂತಲೆಯ ವಿಷಯದಲ್ಲಿ ನಮ್ಮ ಸ್ನೇಹ ಕನಿಕರಗಳನ್ನು ಇನ್ನಷ್ಟು ದೃಢಪಡಿಸುತ್ತಾನೆ. ಕಣ್ವ ಮಹರ್ಷಿಗಳು ಗರ್ಭಿಣಿಯಾದ ತಮ್ಮ ಸಾಕುಮಗಳನ್ನು ಗಂಡನ ಮನೆಗೆ ಕಳಿಸಿಕೊಡುವ ದೃಶ್ಯ ಅದು. ಶಕುಂತಲೆಗೆ ಅತ್ತ ಪತಿಯನ್ನು ಸೇರಬೇಕೆಂಬ ತವಕ; ಇತ್ತ ತಂದೆಯನ್ನು, ಗೆಳತಿಯರನ್ನು, ಒಡನಾಡಿಗಳನ್ನು, ತಪೋವನವನ್ನು ಬಿಟ್ಟು ಹೋಗಲಾರದ ಕಳವಳ. ಅವಳನ್ನು ಬೀಳ್ಕೊಡುವಾಗ ಇವರಿಗೂ ತೀವ್ರ ವೇದನೆ. ಈ ಅಗಲಿಕೆಯ ಚಿತ್ರವು ನೋಟಕರ ಕರುಳನ್ನು ಹಿಂಡುತ್ತದೆ. ಆದಕಾರಣವೇ "ಕಾವ್ಯೇಷು ನಾಟಕಂ ರಮ್ಯಂ ತತ್ರ ರಮ್ಯಾ ಶಕುಂತಲಾ" ಎಂಬುದಕ್ಕೆ ಉತ್ತರ ಭಾಗವಾಗಿ, "ತತ್ರಾಪಿ ಚ ಚತುರ್ಥೋಽಂಕಃ ತತ್ರ ಶ್ಲೋಕಚತುಷ್ಟಯಂ" ಎಂಬ ಶ್ಲಾಘನೆ ಹುಟ್ಟಿತು. ಈ ಶ್ಲೋಕಚತುಷ್ಟಯದಲ್ಲಿ ಒಂದನ್ನಾದರೂ ಉದಾಹರಿಸಿದಲ್ಲದೆ ಮನಸ್ಸು ನಿಲ್ಲದು. ಕಣ್ವರು ತಪೋವನದ ತರುಗಳಿಗೆ ಹೇಳುವ ಮಾತು ಇದು :

ಜಲವನದಾವಳೀಂಟಳೆರೆದಲ್ಲದೆ ನಿಮ್ಮಯ ಪಾತೆಗಂಬುವಂ
ತಳಿರ್ಗಳ ಕೊಯ್ಯಳಾವಳೊಲವಿಂ ಮಿಗೆ ಸಿಂಗರದಾಸೆಯುಳ್ಳೊಡಂ
ಅಲರ್ಗಳ ತಾಳ್ದೆ ನೀವು ಮೊದಲುತ್ಸವವಾಂತಪಳಾವಳಾ ಶಕುಂ—
ತಳೆ ಪತಿಸದ್ಮಕೈದಿದಪಳಾಕೆಗನುಜ್ಞೆಯನೀವುದೆಲ್ಲರುಂ ॥

(ಬಸವಪ್ಪಶಾಸ್ತ್ರಿಗಳ ಅನುವಾದ)

ಶಕುಂತಲೆಯ ಹೃದಯ ಎಷ್ಟು ಮೃದು, ಆಶ್ರಮದ ಮರಬಳ್ಳಿಗಳಲ್ಲಿ ಅವಳಿಗಿದ್ದ ಸೋದರಸ್ನೇಹ ಎಷ್ಟು ಸಹಜ ಎಂಬುದಕ್ಕೆ ಇದಕ್ಕಿಂತ ನಿದರ್ಶನ ಬೇಕೆ!

ಎಂಥ ಮೋಹದ ಮಗಳಾದರೂ ತೌರುಮನೆಯನ್ನು ಒಂದು ದಿನ ಬಿಡಲೇಬೇಕು. ಇದು ಸಂಸಾರದ ಸಾಮಾನ್ಯನಿಯಮ. ಹೆಣ್ಣು ಹೆರರೊಡವೆಯೆಂದು

ಕಣ್ವರಂತೆ ನಾವೂ ಸಮಾಧಾನ ತಂದುಕೊಳ್ಳುತ್ತೇವೆ. ಪತಿಗೃಹದಲ್ಲಿ ಅವಳಿಗೆ ಎಲ್ಲ ಮಂಗಳಗಳೂ ಒದಗಲೆಂದು ಹಾರೈಸುತ್ತೇವೆ. ಅಯ್ಯೋ, ಶಕುಂತಲೆಗೆ ಆ ಭಾಗ್ಯ ಸದ್ಯಕ್ಕೆ ಎಲ್ಲಿಂದ ಬರಬೇಕು! ನಾಲ್ಕನೆಯ ಅಂಕವು ವೀಣೆಯ ಮಂಜುಳ ಸ್ವನದಂತೆ ನಮ್ಮನ್ನು ಮರುಳುಗೊಳಿಸಿ, ದುರ್ವಾಸರ ಶಾಪದ ವಿಷಯವನ್ನು ನಮ್ಮ ಸ್ಮೃತಿಯಿಂದ ಒಂದು ಘಳಿಗೆಯ ಕಾಲ ಜಾರಿಸಿಬಿಟ್ಟಿತ್ತು. ಆದರೆ ಋಷಿಯ ಬಿರುನುಡಿ ವಿಫಲವಾಗುವುದುಂಟೆ! ಹಿಂದಿನ ಅಂಕದಲ್ಲಿ ಸ್ನೇಹಾರ್ದ್ರ ವಾಗಿದ್ದ ಹೃದಯವನ್ನು ಈಗ ನಾವು ಕಲ್ಲುಮಾಡಿಕೊಂಡು ಶಕುಂತಲೆಯ ದುರ್ದೈವದ ಪರಮಾವಧಿಯನ್ನು ಇನ್ನು ಐದನೆಯ ಅಂಕದಲ್ಲಿ ನೋಡಲು ಸಜ್ಜಾಗಬೇಕು. ಎರಡು ಕಡೆಗಳಲ್ಲೂ ಕರುಣವೇ ರಸ; ಆದರೆ ಒಂದರ ಮಾರ್ದವಕ್ಕೂ ಮತ್ತೊಂದರ ಭೀಷಣತೆಗೂ ಎಂಥ ಅಂತರ! ನಾಲ್ಕನೆಯ ಅಂಕವಾದ ಕೂಡಲೆ ಬರುವುದರಿಂದ ಐದನೆಯ ಅಂಕದ ಪರಿಣಾಮ ಇನ್ನಷ್ಟು ತೀವ್ರವಾಗುತ್ತದೆ. ಕಥೆಯ ಕೇಂದ್ರದೃಶ್ಯವೇ ಇದು: ನಾಟಕೀಯ ಸ್ವಾರಸ್ಯ ಇಲ್ಲಿ ಶಿಖರವನ್ನು ಮುಟ್ಟುತ್ತದೆ. ಅದರ ವಿಚಾರವನ್ನು ಇಲ್ಲಿ ಲಂಬಿಸಲು ಅವಕಾಶವಿಲ್ಲದಿದ್ದರೂ ಒಂದು ಸಂಗತಿಯ ಕಡೆಗೆ ಗಮನವನ್ನೆಳೆಯಲೇಬೇಕು. ಶಕುಂತಲೆ ಗಂಡನ ಮನೆಗೆ ಎಷ್ಟೊಂದು ತವಕದಿಂದ, ಆಸೆಯಿಂದ ಬಂದಳು! ತನ್ನ ಹೃದಯೇಶ್ವರನ ಪ್ರಾಣ ವಲ್ಲಭೆಯಾಗಿ ಪಟ್ಟದ ರಾಣಿಯಾಗಿ ಸುಖವನ್ನು ಕಾಣುವೆನೆಂದು ನಂಬಿದ್ದಳು. ಆದರೆ ದುಷ್ಯಂತನಿಗೆ ಅವಳನ್ನು ಮದುವೆಯಾಗಿದ್ದ ವಿಷಯದಲ್ಲೇ ಸಂದೇಹ; ಬಹುದೂರಕ್ಕೆ ಏರಿದ್ದ ಅವಳ ಆಸೆ ಇನ್ನೆಲ್ಲಿ! ರಾಣಿಯಾಗಿ ಬಾಳುವುದಿರಲಿ; ತಾನು ಸ್ವಚ್ಛಂದಚಾರಿಣಿಯಲ್ಲವೆಂದು ನಾಲ್ಕು ಜನರ ಮುಂದೆ ನಿಂತು ರುಜುವಾತು ಮಾಡಿಕೊಡಬೇಕಾದ ಪ್ರಸಂಗವೊದಗಿತು. ತನ್ನನ್ನು ಪರಸ್ತ್ರೀಯೆಂದು ಅವನು ತಿಳಿದದ್ದರಿಂದ "ಆರ್ಯಪುತ್ರ" ಎಂದು ಸಂಬೋಧಿಸಲು ಕೂಡ ಅವಳಿಗೆ ಅಧಿಕಾರವಿಲ್ಲವಾಯಿತು. ಆಶ್ರಮದಿಂದ ಹೊರಟ ವೇಳೆಯಲ್ಲಿ ತನಗೆ ಸಖಿಯರು ಕೊಟ್ಟಿದ್ದ ಸೂಚನೆ ಸ್ಮರಣೆಗೆ ಬಂದು, ಗುರುತಿನ ಉಂಗುರವನ್ನು ತೋರಿಸುವೆನೆಂದು ಶಂಕುತಲೆ ಬೆರಳನ್ನು ನೋಡಿಕೊಳ್ಳುತ್ತಾಳೆ. ಆ ದುರದೃಷ್ಟದ ಉಂಗುರ ಯಾವಾಗಲೋ ಮಾಯವಾಗಿದೆ. "ಮತ್ತೊಂದು ಗುರುತನ್ನು ಹೇಳುವೆ" ನೆನ್ನುತ್ತಾಳೆ. ನೋಡತಕ್ಕದ್ದು ಆಯಿತು; ಇನ್ನು ಕೇಳತಕ್ಕದ್ದು ಬಂತು!—ಎಂದು ದುಷ್ಯಂತನ ಭಾವನೆ. ಕೈಹಿಡಿದ ಗಂಡನು ಹೀಗೆ ನಂಬಿಕೆ ಸಾಲದ ನ್ಯಾಯಾಧೀಶ

ನಂತೆ ವಿಚಾರಣೆ ಮಾಡುತ್ತಾ ಕುಳಿತಿದ್ದಾನೆ. ಆದರೂ ಶಕುಂತಲೆ ಧೈರ್ಯಗುಂದದೆ ತನ್ನ ಹೇಳಿಕೆಯನ್ನು ಮುಂದುವರಿಸಲೇಬೇಕಾಗಿದೆ. ತಮ್ಮಿಬ್ಬರಿಗೆ ಮಾತ್ರವೇ ಗೊತ್ತಿದ್ದ ಒಂದು ಸಂಗತಿಯನ್ನು ಅವಳು ಈಗ ಜ್ಞಾಪಿಸುತ್ತಾಳೆ:

> ಒಂದು ದಿನ ನವಮಾಲಿಕಾಮಂಟಪದಲ್ಲಿ ಕುಳಿತಿದ್ದಾಗ ನೀರು ತುಂಬಿದ ತಾವರೆಯೆಲೆಯ ದೊನ್ನೆ ನಿನ್ನ ಕೈಯಲ್ಲಿರಲಿಲ್ಲವೆ? . . . ಆಗ ನನ್ನ ಸಾಕುಮಗುವಾದ ದೀರ್ಘಾಪಾಂಗವೆಂಬ ಜಿಂಕೆಯ ಮರಿ ಸಮೀಪಕ್ಕೆ ಬಂತು. ಮೊದಲು ಇದು ನೀರು ಕುಡಿಯಲಿ ಎಂದು ನೀನು ಕನಿಕರದಿಂದ ಅದಕ್ಕೆ ನೀರು ತೋರಿಸಿದೆ. ಆದರೆ ನಿನ್ನ ಬಳಕೆಯಿಲ್ಲದ್ದರಿಂದ ಅದು ನಿನ್ನ ಕೈಯ ಬಳಿಗೆ ಬರಲಿಲ್ಲ. ಬಳಿಕ ಅದೇ ದೊನ್ನೆಯನ್ನು ನಾನು ಹಿಡಿದುಕೊಂಡಾಗ ಅದು ನೀರನ್ನು ಬಯಸಿತು. ಆಗ, 'ಎಲ್ಲರಿಗೂ ತಮ್ಮ ತಮ್ಮ ಜನದಲ್ಲೇ ನಂಬಿಕೆ; ನೀವಿಬ್ಬರೂ ಕಾಡುಪ್ರಾಣಿಗಳು' —ಎಂದು ನೀನು ಹಾಸ್ಯಮಾಡಿದೆ.

ಎಂಥ ಪ್ರಸಂಗ! ಪ್ರಿಯನ ಪರಿಹಾಸಕ್ಕೆ ಈ ಮುಗ್ಧೆ ಯಾವ ಉತ್ತರವನ್ನೂ ಕೊಡದೆ, ಅದರ ಸೊಗಸನ್ನು ಮೌನವಾಗಿ ಸವಿದಿದ್ದಳು. ಅವನ ಪ್ರೇಮದ ಫಲವನ್ನು ತನ್ನ ಬಸಿರಿನಲ್ಲಿ ತಳೆದು ಪೋಷಿಸಿದಂತೆ, ಈ ನರ್ಮಕಥೆಯನ್ನು ತನ್ನ ಚಿತ್ತದಲ್ಲಿ ಬಚ್ಚಿಟ್ಟು ಜೋಪಾನವಾಗಿ ಕಾಪಾಡಿಕೊಂಡು ಬಂದಿದ್ದಳು. ಅವನು ತೊಡಿಸಿದ ಉಂಗುರಕ್ಕಿಂತಲೂ ಅವನು ಆಡಿದ ಈ ಮಾತು ಅವಳಿಗೆ ಅನರ್ಘ್ಯ ರತ್ನವಾಗಿತ್ತು. ಇಂಥ ಪ್ರಣಯಗೋಪ್ಯವನ್ನು ಹಲವರೆದುರಿಗೆ ಬೀದಿಯ ಘೋಷಣೆಯಾಗುವಂತೆ ಈ ಅಲ್ಪಭಾಷಿಣಿ ವಿವರಿಸಿ ಹೇಳಬೇಕಾಯಿತು. ಆದರೂ ದುಷ್ಯಂತನಿಗೆ ನೆನಪು ಮರಳಲಿಲ್ಲ; ನಂಬಿಕೆ ಹುಟ್ಟಲಿಲ್ಲ. ಶಕುಂತಲೆಗೆ ಇದಕ್ಕಿಂತಲೂ ಘೋರಯಾತನೆ ಬೇಕೆ? ಈ ಧೂರ್ತನು ತನ್ನನ್ನು ಉದ್ದೇಶಪೂರ್ವಕವಾಗಿ ವಂಚಿಸುತ್ತಿರುವನೆಂದೇ ಅವಳಿಗೆ ತೋರಿತು. ಇತ್ತ ಗಂಡನ ಮನೆ ಹೀಗೆ ದೂರವಾಯಿತು; ಅತ್ತ ತಂದೆಯ ಮನೆಗೆ ಅಪವಾದ ಹೊತ್ತ ತಾನು ಕಾಲಿಡುವಂತಿಲ್ಲ. "ಓ ಭೂಮಿದೇವಿ, ನನಗಾಗಿ ಬಾಯಿ ತೆರೆ!" ಎಂಬ ಆರ್ತನಾದವೊಂದೇ ಅವಳ ಭಾಗಕ್ಕೆ ಉಳಿದದ್ದು.

ಆದರೆ ಅನಾಹುತ ಇಷ್ಟು ದೂರ ಹೋಗುವುದು ದೈವಸಂಕಲ್ಪವಾಗಿರಲಿಲ್ಲ. ಹೆತ್ತ ಕೂಡಲೇ ಕೂಸನ್ನು ತೊರೆದಿದ್ದ ಮೇನಕೆಗೆ ಈಗ ಕರುಳು ಬಾಧಿಸಿ, ದುಃಖಭಾಗಿನಿಯಾದ ಮಗಳನ್ನು ಅವಳು ಹತ್ತಿರಕ್ಕೆ ಕರೆದುಕೊಂಡಳು. ಮಾರೀಚ

ಮಹರ್ಷಿಗಳ ದಿವ್ಯಾಶ್ರಮದಲ್ಲಿ,ತಾಯ ಆರೈಕೆಯಲ್ಲಿ,ಶಕುಂತಲೆ ಭರತಭೂಮಿಯ ಪ್ರಥಮ ಚಕ್ರವರ್ತಿಯನ್ನು ಹೆತ್ತಳು.ಗಂಡನು ತನ್ನನ್ನು ನಿಷ್ಕಾರಣವಾಗಿ ನಿರಾಕರಿಸಿದ್ದರೂ ಅವಳು ಮಾತ್ರ ಅವನನ್ನು ತನ್ನ ಹೃದಯದಿಂದ ಹೊರದೂಡಲಿಲ್ಲ. ಪಾತಿವ್ರತ್ಯದ ಕಠಿನ ನಿಯಮಗಳನ್ನು ಪಾಲಿಸುತ್ತಾ, ಜೀವಿತಸರ್ವಸ್ವವಾದ ಮಗನನ್ನು ನೋಡಿಕೊಳ್ಳುತ್ತಾ, ಈ ಸುಶೀಲೆ ವರ್ಷಗಳನ್ನು ನೂಕಿದಳು. ಇತ್ತ, ಶಕುಂತಲೆಯ ಬೆರಳಿನಿಂದ ಜಾರಿ ಶಚೀತೀರ್ಥದಲ್ಲಿ ಮುಳುಗಿದ್ದ ಉಂಗುರ ಒಬ್ಬ ಬೆಸ್ತರವನ ಮೂಲಕ ದುಷ್ಯಂತನ ಕೈಗೆ ಕೊನೆಗೆ ಸೇರಿತು. ಅದನ್ನು ಕಂಡೊಡನೆಯೇ ಅವನಿಗೆ ತನ್ನ ಪ್ರಾಣಪ್ರಿಯೆಯ ನೆನಪೂ, ಅದರ ಬೆನ್ನ ಹಿಂದೆಯೇ ಅಪಾರವಾದ ಪರಿತಾಪವೂ ಒದಗಿದುವು. ಶಕುಂತಲೆ ತನ್ನಿಂದ ಧಿಕ್ಕಾರಹೊಂದಿ, ಕಣ್ವ ಶಿಷ್ಯರ ಗರ್ಜನೆಗೆ ನಡುಗಿ, ನೆಲೆತಪ್ಪಿ ನಿಂತಾಗ, ಅವಳು ತನ್ನ ಕಡೆಗೆ ಬೀರಿದ ಬಾಷ್ಪಾಕುಲವಾದ ದೃಷ್ಟಿ ಈಗ ವಿಷದ ಮುಳ್ಳಿನಂತೆ ಅವನನ್ನು ದಹಿಸತೊಡಗಿತು. . . . ದುಷ್ಯಂತನ ಉತ್ಕಟ ಪಶ್ಚಾತ್ತಾಪದ ವೃತ್ತಾಂತ ಶಕುಂತಲೆಯ ಕಿವಿಗೂ ಮುಟ್ಟಿತು.



ಇನ್ನು ಹೇಮಕೂಟದ ದಿವ್ಯಾಶ್ರಮದಲ್ಲಿ ದಂಪತಿಗಳ ಪುನಃ ಸಮಾಗಮ. ತಮ್ಮಿಬ್ಬರ ಅಗಲಿಕೆಗೆ, ಅಳಲಿಗೆ, ಋಷಿಶಾಪವೇ ನಿಜವಾದ ಕಾರಣವೆಂದು ಇಬ್ಬರಿಗೂ ತಿಳಿಯುವ ಮೊದಲೇ ಅವರ ಹೃದಯಗಳು ಒಂದುಗೂಡುವಂತೆ ಸಂವಿಧಾನವನ್ನು ಕಲ್ಪಿಸಿ, ಗಾಢಪ್ರೇಮದ ಅಸಾಮಾನ್ಯ ಶಕ್ತಿಯನ್ನು ಕಾಳಿದಾಸನು ನಿದರ್ಶಿಸಿರುವನು. ತೊರೆದ ಗಂಡನು ಈಗ ಮರಳಿ ಬಂದಿದ್ದಾನೆ; ಅನುತಾಪದಿಂದ ಸೊರಗಿ ಗುರುತು ಸಿಕ್ಕಲಾರದಷ್ಟು ಬಡವಾಗಿದ್ದಾನೆ; ಚರಣತಲದಲ್ಲಿ ಹೊರಳಿ ಕ್ಷಮೆ ಬೇಡುತ್ತಿದ್ದಾನೆ. ಶಕುಂತಲೆಗೆ ಇನ್ನೇನು ಬೇಕು? ಪ್ರಿಯನ ಹಿಂದಿನ ಅಪರಾಧವೆಲ್ಲವೂ ಅವಳಿಗೆ ಮರೆತುಹೋಗುತ್ತದೆ; ಪ್ರೇಮದ ಕಂಬನಿಯಿಂದ ಅವನನ್ನು ಅಭಿಷೇಕಿಸಿ ಸ್ವೀಕಾರ ಮಾಡುತ್ತಾಳೆ. ಶಕುಂತಲೆಯ ಕಣ್ಣೀರನ್ನು ಒರಸಲು ದುಷ್ಯಂತನು ಕೈನೀಡಿದಾಗ ಅವನ ಬೆರಳಿನಲ್ಲಿದ್ದ ಉಂಗುರ ಅವಳಿಗೆ ಕಾಣಿಸುತ್ತದೆ. ತಮ್ಮ ಪುನಃ ಸಮಾಗಮಕ್ಕೆ ಗುರುತಾಗಿ ಆ ಉಂಗುರವನ್ನು ಮತ್ತೆ ಧರಿಸುವಂತೆ ಅವನು ಕೋರುತ್ತಾನೆ. ಆದರೆ ಶಕುಂತಲೆ, "ಇದರಲ್ಲಿ ನನಗೆ ನಂಬಿಕೆಯಿಲ್ಲ; ಆರ್ಯಪುತ್ರನೇ ಇದನ್ನು ಧರಿಸಿಕೊಳ್ಳಬೇಕು" ಎಂದು ಉತ್ತರಕೊಟ್ಟು, ನೆಚ್ಚಿಕೆತಪ್ಪಿದ ಆ ಉಂಗುರವನ್ನು ನಿರಾಕರಿಸುತ್ತಾಳೆ. ಶಕುಂತಲೆ

ಈಗ ದಿವ್ಯ ತಪಸ್ವಿನಿಯಾಗಿದ್ದರೂ ಅವಳ ಸರಳ ಮಾನವ ಹೃದಯ ಮಾತ್ರ ಮರೆಯಾಗಿಲ್ಲ!

ಪ್ರೇಮದ ಕುಲುಮೆಯಲ್ಲಿ ಶಕುಂತಳೆಯ ಬಾಳು ಪುಟಗೊಂಡ ಬಗೆಯನ್ನು ಕಂಡೆವು. ಇನ್ನು ಅವಳ ಪ್ರಿಯನನ್ನು ಕುರಿತು ಎರಡು ಮಾತು. 'ಅಭಿಜ್ಞಾನ ಶಾಕುಂತಲ'ಕ್ಕೆ "ದುಷ್ಯಂತೋದ್ಧಾರ" ಎಂಬ ಎರಡನೆಯ ಹೆಸರನ್ನು ಕೊಡಬಹುದು. ಕಾಳಿದಾಸನ ನಾಟಕಕ್ಕೆ ಮಹಾಭಾರತದ ಒಂದು ಉಪಾಖ್ಯಾನ ಆಧಾರವಸ್ತು. ಆದರೆ ಅಲ್ಲಿಯ ದುಷ್ಯಂತನನ್ನೂ ಇಲ್ಲಿಯ ದುಷ್ಯಂತನನ್ನೂ ಹೋಲಿಸಿದರೆ, ಕಾಳಿದಾಸನು ದುರ್ವಾಸನ ಶಾಪವನ್ನು ಹೊಸದಾಗಿ ಕಲ್ಪಿಸಿ ದುಷ್ಯಂತನ ಪಾತ್ರವನ್ನು ಎಷ್ಟೊಂದು ಉತ್ತಮಗೊಳಿಸಿರುವನೆಂಬುದು ವ್ಯಕ್ತವಾಗುತ್ತದೆ. ಮೂಲೋಪಾಖ್ಯಾನದಲ್ಲಿ, ದುಷ್ಯಂತನು ಶಕುಂತಲೆಯೊಂದಿಗೆ ತಾನು ಬೆಳಸಿದ್ದ ಸಂಬಂಧವನ್ನು ತಿಳಿದೂ ತಿಳಿದೂ ಅಪಲಾಪಿಸಿ ಅಧಮನಾಗಿ ವರ್ತಿಸುತ್ತಾನೆ. ನಾಟಕದಲ್ಲಾದರೆ, ಋಷಿಶಾಪದ ಪ್ರಭಾವದಿಂದ ಶಕುಂತಲೆಯ ನೆನಪು ಅವನ ಮನಸ್ಸಿನಿಂದ ಸಂಪೂರ್ಣವಾಗಿ ಅಳಿಸಿ ಹೋಗಿರುತ್ತದೆ. ಅವಳು ಅನುಪಮ ಸುಂದರಿಯಾದರೂ ತನ್ನ ಭಾಗಕ್ಕೆ ಅನ್ಯಪತ್ನಿಯಾದ ಕಾರಣ ಅವಳನ್ನು ದಿಟ್ಟಿಸಿ ನೋಡುವುದಕ್ಕೂ ದುಷ್ಯಂತನಿಗೆ ಇಷ್ಟವಿಲ್ಲ. ಮದುವೆಯಾದದ್ದನ್ನು ನಾನೇ ಮರೆತಿರುವೆನೋ ಈಕೆಯೇ ಸುಳ್ಳಾಡುತ್ತಿರುವಳೋ ಎಂಬ ಸಂಶಯ ಒಡ್ಡಿರುವಾಗ, ಪತ್ನೀಪರಿತ್ಯಾಗದ ದೋಷ ಹೆಚ್ಚೋ ಪರಸ್ತ್ರೀಸಂಪರ್ಕದ ದೋಷ ಹೆಚ್ಚೋ— ಎಂದು ದುಷ್ಯಂತನು ಕೇಳುವ ಪ್ರಶ್ನೆ ಕಣ್ವಶಿಷ್ಯರ ಬಾಯನ್ನೂ ಕಟ್ಟುತ್ತದೆ. ಹೀಗೆ ಶಕುಂತಲೆಯನ್ನು ನಿರಾಕರಿಸುವ ದೃಶ್ಯದಲ್ಲೇ ದುಷ್ಯಂತನು ಧೀರೋದಾತ್ತನಾಗಿ ಶೋಭಿಸುತ್ತಾನೆ.

ಆದರೆ ಈ ಉದ್ಧಾರವನ್ನು ವಿವರಿಸುವುದು ನಮ್ಮ ಪ್ರಕೃತೋದ್ದೇಶವಲ್ಲ. ನಾಟಕದ ಚೌಕಟ್ಟಿನೊಳಗೇ ಇನ್ನೊಂದು ಉದ್ಧಾರ ನಡೆದಿದೆ. ಶಕುಂತಲೆಯನ್ನು ಕಾಣುವುದಕ್ಕೆ ಮೊದಲೇ ದುಷ್ಯಂತನಿಗೆ ವಸುಮತಿ, ಹಂಸಪದಿಕೆ ಮೊದಲಾದ ಹಲವರು ಪತ್ನಿಯರಿದ್ದರು. ಆದರೆ ಅರಮನೆಯ ನಾಗರಿಕಜೀವನದಲ್ಲಿ ಆಳವಾದ ಚಿರಸ್ಥಾಯಿಯಾದ ಪ್ರೇಮವನ್ನು ದುಷ್ಯಂತನು ಅರಿತಿದ್ದಂತೆ ತೋರುವುದಿಲ್ಲ. ಈ ತಾಪಸಕನ್ಯೆಯನ್ನು ಕಂಡೊಡನೆಯೇ ಅವಳಲ್ಲಿ ಅವನ ಮನಸ್ಸು ಅನನ್ಯವಾಗಿ ನಿರಂತರವಾಗಿ ನೆಲಸಿತು; ಈ ನೈಜವಾದ ಪ್ರೇಮದಿಂದ ಅವನ ಆತ್ಮ ಉದ್ಧಾರ

ವಾಯಿತು. ದುರ್ವಾಸನ ಶಾಪ ತಟ್ಟದೆ ಹೋಗಿದ್ದರೆ ದುಷ್ಯಂತನು ಶಕುಂತಲೆಯನ್ನು ಕೆಲವು ಕಾಲ ಮಾತ್ರ ಪ್ರೀತಿಸಿ ಉಪೇಕ್ಷಿಸಿಬಿಡುತ್ತಿದ್ದನು; ಇವಳೂ ಇನ್ನೊಬ್ಬಳು ಹಂಸಪದಿಕೆಯಾಗಿ ಮೂಲೆಗೆ ಸೇರುತ್ತಿದ್ದಳು ಎಂಬ ಅಭಿಪ್ರಾಯವೊಂದುಂಟು. ಆದರೆ ಇದನ್ನು ಒಪ್ಪುವುದು ಕಷ್ಟ. ಶಕುಂತಲೆಯಲ್ಲಿ ದುಷ್ಯಂತನಿಗೆ ಮೂಡಿದ ಪ್ರೇಮದ ಮಟ್ಟವೇ ಬೇರೆಯೆಂದು ತೋರುತ್ತದೆ. ಇದು ನಾಲ್ಕು ದಿನ ಮಿಂಚಿ ಮಾಯವಾಗುವುದಲ್ಲ; ಯಾವಜ್ಜೀವವೂ, ಬಹುಶಃ ಆಚೆಗೂ, ನೆಲಸತಕ್ಕದ್ದು. ಹೀಗೆ ಹೇಳಲು ಕಾರಣವುಂಟು. ಶಾಪದ ತಮಸ್ಸು ಆವರಿಸಿದ ಬಳಿಕ, ಶಕುಂತಲೆಯ ವಿಚಾರದ ಮಟ್ಟಿಗೆ ದುಷ್ಯಂತನು ಹೊಸ ಜನ್ಮವೆತ್ತಿದಂತೆಯೇ ಆಯಿತು. ಯಾರು ಎಷ್ಟೇ ಬಗೆಯಾಗಿ ಜ್ಞಾಪಿಸಲಿ, ಕಡೆಗೆ ಶಕುಂತಲೆಯೇ ಸಾಕ್ಷಾತ್ತಾಗಿ ಬಂದು ನಂಬಿಕೆ ಕೊಡಲಿ, ದುಷ್ಯಂತನಿಗೆ ಅವಳ ನೆನಪಾಗುವಂತಿರಲಿಲ್ಲ. ಇಂಥ ಪರಿಸ್ಥಿತಿಯಲ್ಲಿ ಅವನಿರುವಾಗ ಐದನೆಯ ಅಂಕದ ಆದಿಯಲ್ಲಿ ಒಂದು ಪ್ರಸಂಗ ನಡೆಯುತ್ತದೆ:

ಪೊಸತಪ್ಪ ಮಧುವ ಬಯಸುತೆ।
ರಸಾಲಮಂಜರಿಯನಂತು ಚುಂಬಿಸಿ ನೀಂ ಸಾ-।
ರಸವಾಸಮಾತ್ರದಿಂ ಸಂ-
ತಸವಾಂತದನೆಂತು ಮರೆದೆಯೆಲೆ ಮಧುಕರನೇ॥

(ಬಸವಪ್ಪಶಾಸ್ತ್ರಿಗಳ ಅನುವಾದ)

ಎಂದು ತುಂಬಿಯನ್ನು ಕುರಿತು ಹಾಡುವ ನೆವದಲ್ಲಿ ಹಂಸಪದಿಕೆ ದುಷ್ಯಂತನನ್ನು ಹಂಗಿಸುತ್ತಾಳೆ. ಈ ಮಧುರಗೀತವನ್ನು ಕೇಳಿ ದುಷ್ಯಂತನ ಮನಸ್ಸು ಉಮ್ಮಳಿಸುತ್ತದೆ. (ಹಂಸಪದಿಕೆಯನ್ನು ಉಪೇಕ್ಷಿಸಿದ್ದಕ್ಕಾಗಿ ಅಲ್ಲ; ಜಾಣ್ಮೆಯಿಂದ ಅವಳು ಹಂಗಿಸಿದ ಬಗೆಯನ್ನು ಅವನು ಶ್ಲಾಘಿಸುತ್ತಾನೆ, ಅಷ್ಟೆ.) ಈ ಹಾಡು ಸ್ಪಷ್ಟವಾಗಿ ಶಕುಂತಲಾಪ್ರಣಯವನ್ನು ಪ್ರೇಕ್ಷಕವರ್ಗಕ್ಕೆಲ್ಲಾ ಸೂಚಿಸುತ್ತದೆ. ಆದರೆ ದುಷ್ಯಂತನಿಗೆ ಮಾತ್ರ ಶಾಪಮಹಿಮೆಯಿಂದ ಅದರ ಅರಿವೇ ಆಗುವಂತಿಲ್ಲ. ಹೀಗಿದ್ದರೂ ಅವನ ಮನಸ್ಸು ಉಮ್ಮಳಿಸುತ್ತದೆ. ಇಷ್ಟಜನವಿಯೋಗ ಯಾವುದೂ ನನಗೆ ಉಂಟಾಗಿಲ್ಲ; ನೆಮ್ಮದಿಯಾಗಿಯೇ ಇದ್ದೇನೆ. ಆದರೂ ಈ ಇಂಚರವನ್ನು ಕೇಳಿ ನನ್ನ ಬಗೆಯೇಕೆ ಹೀಗೆ ಪರ್ಯುತ್ಸುಕವಾಗಿದೆ? ಅರಿವಿಗೆ ನಿಲುಕದಿದ್ದರೂ ಸಂಸ್ಕಾರರೂಪವಾಗಿ ನೆಲಸಿರುವ ಜನ್ಮಾಂತರದ ಸ್ನೇಹವೊಂದನ್ನು ಹೃದಯ ನೆನೆಯುತ್ತಿರ

ಬೇಕು—ಹೀಗೆಂದು ದುಷ್ಯಂತನು ಪರಿಭಾವಿಸುತ್ತಾನೆ. ಇದು ನಿಜ ! ಶಾಪಕ್ಕೆ ಹಿಂದಿನ ಜನ್ಮಾಂತರದ ಶಕುಂತಲಾಪ್ರೇಮ ಈಗ ಸ್ಮರಣೆಗೆ ಗೋಚರವಾಗದಿದ್ದರೂ ಹೃದಯದ ಆಳದಲ್ಲಿ ಕುಳಿತು, ಅರಿಯದ ಮೂಗುಪೆಟ್ಟಿನ ದುಡಿತದಂತೆ ಅವನನ್ನು ಬಾಧಿಸುತ್ತಿದೆ. ದುರ್ವಾಸರ ಶಾಪಕ್ಕಿಂತಲೂ ದುಷ್ಯಂತನ ಪ್ರೇಮ ಪ್ರಬಲತರ ವಾಯಿತು ; ಮರವೆ ಮುಸುಕಿದರೂ ಅದರ ಮಿಡಿತ ತಪ್ಪಲಿಲ್ಲ !

ಈ ಅಸಾಧಾರಣ ಪ್ರೇಮ ದುಷ್ಯಂತನಿಗೆ ವಿಶೇಷ ಅನುಭವವನ್ನು ತಂದಿತು ; ಅವನ ಹೃದಯವನ್ನು ಶೋಧಿಸಿತು. ಶಕುಂತಲೆಯನ್ನು ನಿರಾಕರಿಸಿದ ಬಳಿಕ ಒದಗಿದ ಪರಿತಾಪದಿಂದ ಅವನ ಆತ್ಮ ಎಷ್ಟು ಮೃದುವಾಯಿತು! ರಾಜ್ಯಪರಿಪಾಲನೆ ಯಲ್ಲಿ ಧರ್ಮದ ಜೊತೆಗೆ ದಯೆಯೂ ಸೇರಿತು. ಈ ವಿಷಯವನ್ನೆಲ್ಲಾ ಇಲ್ಲಿ ವಿವರಿಸಲು ಅವಕಾಶ ಸಾಲದು. ಮಿಕ್ಕ ವಿಚಾರವಿರಲಿ. ಅವನ ಕೆಚ್ಚಿನಲ್ಲಾದ ಮಾರ್ಪಾಡನ್ನೇ ನೋಡಿ. ನಾಟಕದ ಮೊದಲಲ್ಲಿ, ತಾನು ಸತ್ಪುರುಷನೆಂಬ ನೆಚ್ಚಿಕೆ ಅವನಿಗಿದ್ದಿತು. ಈಗ ಅಹಂಕಾರ ಸುಟ್ಟು ನಮ್ರತೆ ಮೊಳೆಯಿತು. "ಸತಾಂ ಹಿ ಸಂದೇಹಪದೇಷು ವಸ್ತುಷು ಪ್ರಮಾಣಮಂತಃಕರಣಪ್ರವೃತ್ತಯಃ" (ಸಂದೇಹಾಸ್ಪದವಾದ ಸಂದರ್ಭಗಳಲ್ಲಿ ಸತ್ಪುರುಷರಿಗೆ ಅಂತಃಕರಣ ಹರಿದ ದಾರಿಯೇ ಪ್ರಮಾಣ) ಎಂದು ತಿಳಿದು, ಆರ್ಯವಾದ ತನ್ನ ಮನಸ್ಸು ಶಕುಂತಲೆ ಯಲ್ಲಿ ನೆಲೆಗೊಂಡ ಕಾರಣದಿಂದ ಅವಳು "ಕ್ಷತ್ರಪರಿಗ್ರಹೋಚಿತೆ"ಯಾಗಿರ ಬೇಕೆಂದು ದಿಟ್ಟತನದಿಂದ ನಿರ್ಧರಿಸಿದ ಮೊದಲಿನ ದುಷ್ಯಂತನೆಲ್ಲಿ ; ನಿದರ್ಶನದ ಮೇಲೆ ನಿದರ್ಶನವೊದಗುತ್ತಿದ್ದರೂ ಸರ್ವದಮನನು ತನ್ನ ಮಗನೇ ಆಗಿರಬೇಕೆಂದು ನಂಬಲು ಅಳುಕಿದ ಈಚಿನ ದುಷ್ಯಂತನೆಲ್ಲಿ! ಕಡೆಗೆ, "ನನ್ನ ತಂದೆ ದುಷ್ಯಂತ ; ನೀನಲ್ಲ" ಎಂದು ಆ ತುಂಟ ತರಳನು ಹೇಳುವತನಕ ಇವನ ಸಂದೇಹವು ಪೂರ್ಣ ವಾಗಿ ಪರಿಹಾರವಾಗಲಿಲ್ಲ !

ಮೊದಲೇ ಶಕುಂತಲಾ-ದುಷ್ಯಂತರು ರೂಪಗುಣಗಳಲ್ಲಿ ಲೋಕಕ್ಕೆ ಮಿಗಿಲಾಗಿ ದ್ದರು ; ಒಬ್ಬರಿಗೊಬ್ಬರು ಅನುರೂಪರಾಗಿದ್ದರು. ಶಾಪದ ಸಾಣೆಗೆ ಸಿಕ್ಕಿದ ಮೇಲಂತೂ ಅವರ ಆತ್ಮಗಳಿಗೆ ಹೊಸ ತೇಜಸ್ಸು ಬಂದಿತು. ಅವರ ಪ್ರೇಮ ಪಾವನವಾಯಿತು ; ಅವರ ಕಥೆ ಅಮರವಾಯಿತು.

# ಜನ್ನನ ಕಾವ್ಯಗಳಲ್ಲಿ ಪ್ರಣಯ ನಿರೂಪಣೆ

ಮನಸಿಜನ ಮಾಯೆ ವಿಧಿವಿಳ
ಸನದ ನೆರಂಬಡೆಯೆ ಕೊಂಡು ಕೂಗದೆ ನರರಂ
ಯಶೋಧರ ಚರಿತೆ, ii. ೬೧

೧

ಲೋಕದಲ್ಲಿ ಒಲುಮೆ ಮೂಡದ ಹೃದಯವಿಲ್ಲ ; ಮುಸುಕದ ವಿವೇಕವಿಲ್ಲ. ಅದು ಸರ್ವಗ್ರಾಸಿ. ಪಾಮರರೆನ್ನದೆ ಪಂಡಿತರೆನ್ನದೆ ಎಲ್ಲರೂ ಅದರ ಹಿಡಿತಕ್ಕೆ ಒಂದಲ್ಲ ಒಂದು ಸಲ ಸಿಕ್ಕಿದವರೇ. ಜನತೆಯ ಪ್ರತಿನಿಧಿಗಳಾದ ಕವಿಗಳಲ್ಲಿ ತಾನೆ ಪ್ರೇಮದ ಮಹಿಮೆಯನ್ನೂ ಅದರ ಕೋಟಲೆಯನ್ನೂ ಹಾಡದವರು ಯಾರುಂಟು? ಯಾವ ಸಾಹಿತ್ಯವನ್ನೇ ನೋಡಲಿ, ಅದರಲ್ಲಿ ಪ್ರೇಮಕಥೆಯೇ ಕವಿಕಾಮಧೇನು. ಅದರ ಸವಿಯನ್ನು ಬಗೆಬಗೆಯಾಗಿ ಹಾಡಿ ಕವಿಗಳು ತಣಿಯರು ; ಮರಳಿ ಮರಳಿ ಕೇಳಿ ಜನಗಳು ದಣಿಯರು.

ನಮ್ಮ ಹಳಗನ್ನಡ ಸಾಹಿತ್ಯವೂ ಈ ಲೋಕಮೋಹಕವಾದ ಶೃಂಗಾರ ರಸಕ್ಕೆ ತನ್ನ ಕಾಣಿಕೆಯನ್ನು ಸಲ್ಲಿಸದೆ ಬಿಟ್ಟಿಲ್ಲ. ಒಂದು ದೃಷ್ಟಿಯಿಂದ, ತನ್ನ ಅಳವಿಗೆ ಮೀರಿಯೇ ಸಲ್ಲಿಸಿದೆಯೆಂದು ಹೇಳಬಹುದು. ಮಹಾಕಾವ್ಯವನ್ನು ರಚಿಸಿ ಕವಿ ಪಟ್ಟವನ್ನು ಗಳಿಸಿದವರೆಲ್ಲರೂ ನಾಯಕನ ವಿಲಾಸ ವಿಹಾರಗಳನ್ನು ತಕ್ಕಮಟ್ಟಿಗೆ ವರ್ಣಿಸಿರಲೇಬೇಕಾಗುತ್ತದೆ. ಆದರೆ ಹಾಗೆ ಮಾಡಿದವರೆಲ್ಲರಿಗೂ ಪ್ರಣಯ ನಿರೂಪಣೆಯಲ್ಲಿ ಚಾತುರ್ಯವುಂಟೆಂದು ಹೇಳುವುದು ಕಷ್ಟ. ಅದು ಕವಿಯ ಕರ್ತವ್ಯ, ಅದಿಲ್ಲದೆ ಮಹಾಕಾವ್ಯವಾಗದು—ಎಂಬ ಬುದ್ಧಿಯಿಂದಲೇ ಹಲವರು ಬರೆದಂತೆ ತೋರುತ್ತದೆ. ಅವರು ವರ್ಣಿಸುವ ಅಂಶಗಳಲ್ಲಿ ವೈವಿಧ್ಯವಿರುವುದಿಲ್ಲ ; ನಿರೂಪಿಸುವ ಸನ್ನಿವೇಶಗಳಲ್ಲಿ ಜೀವಕಳೆಯುಕ್ಕುವುದಿಲ್ಲ. ಲೋಕದಲ್ಲಿ ರತಿಭಾವವು ಸರ್ವಸಾಧಾರಣವಾದರೂ, ಕಾವ್ಯದಲ್ಲಿ ಅದರ ಹೃದಯವನ್ನರಿತು ಸರಸವಾಗಿ ನುಡಿದು ವಾಚಕರನ್ನು ಮರುಳುಮಾಡತಕ್ಕವರು ಎಲ್ಲೋ ಕೆಲವು ಮಂದಿ. ಅಂಥ ಕವಿಗಳಲ್ಲಿ ಜನ್ನನು ಒಬ್ಬನು.

ಜನ್ನನು ಶೃಂಗಾರಪ್ರಿಯನೆನ್ನುವುದಕ್ಕೆ ಸಾಕ್ಷಿಯಾಗಿ ಆ ವಿಷಯಕ್ಕೇ ಮೀಸ

ಲಿಟ್ಟ ಅವನ ಕೃತಿಯೊಂದುಂಟು. ಅವನು 'ಸ್ಮರತಂತ್ರ'ವೆಂಬ ಗ್ರಂಥವನ್ನು ಬರೆದಂತೆ, "ಮೋಹಾನುಭವಮುಕುರ (ಸು. ೧೪೦೦) ಎಂಬ ಗ್ರಂಥದಿಂದ ಊಹಿಸಲಾಗಿದೆ. ಈ ಗ್ರಂಥವು ('ಸ್ಮರತಂತ್ರ'ವು) ನಮಗೆ ದೊರೆತಿಲ್ಲ" ಎಂದು ಕವಿಚರಿತೆಯಲ್ಲಿ (i. ೩೨೮) ಹೇಳಿದೆ. ಆದರೆ, 'ಮೋಹಾನುಭವಮುಕುರ'ದ[1] ಕೊನೆಯಲ್ಲಿರುವ

ವರಜಂನ ಕವೀಶ್ವರನಿಂ
ಸ್ಮರತಂತ್ರ ಪ್ರೌ[ಢಿ]ಗೊರೆವಿಗಿಲ್ ತಾನೆನೆ ಸಂ- ।
ದುರುತರದನುಭವಮುಕುರಂ
ಸ್ಥಿರಮಿರಿಸುಗೆ ಚಂದ್ರತಾರೆಯುಳ್ಳನ್ನೆವರಂ ॥ (ಪ. ೧೧೪)

ಎಂಬ ಪದ್ಯವನ್ನು ನೋಡಿದರೆ, ಗ್ರಂಥದ ಸರಿಯಾದ ಹೆಸರು 'ಅನುಭವಮುಕುರ'ವೆಂದೂ ಜನ್ನಕವಿ ರಚಿಸಿದ ಕಾವ್ಯವೇ ಇದೆಂದೂ ತೋರುತ್ತದೆ. ('ಸ್ಮರತಂತ್ರ'ವೆಂಬ ಹೆಸರಿನ ಕಾವ್ಯ ಬೇರೆ ಇತ್ತು ; ಅದನ್ನು ಜನ್ನನು ಬರೆದನು ; 'ಅನುಭವಮುಕುರ'ವು ಪರಕರ್ತೃಕ—ಎಂದು ಅರ್ಥಮಾಡಲು ಆಧಾರ ಸಾಲದು.) ಈ ಅನುಭವಮುಕುರವು ೧೧೪ ಪದ್ಯಗಳನ್ನುಳ್ಳ ಒಂದು ಲಘುಕಾವ್ಯ. ಇದರಲ್ಲಿ ಬಗೆಬಗೆಯ ವೃತ್ತ ಪ್ರಭೇದಗಳು ಬಂದಿವೆ ; ಅಪ್ರಚುರವಾದ ವೃತ್ತಜಾತಿಗಳೇ ಹಲವಿವೆ. ಸಾಮಾನ್ಯವಾಗಿ ಪ್ರತಿಪದ್ಯದಲ್ಲೂ ಕವಿ ಕಾಮಿನಿಯನ್ನು ಸಂಬೋಧಿಸಿ ರತಿಲೀಲೆಗೆ ಸಂಬಂಧಿಸಿದ ವಿಷಯಗಳನ್ನು ಪ್ರಶಂಸೆ ಮಾಡುತ್ತಾನೆ. ಈ ಗ್ರಂಥವು ಜನ್ನನಿಂದ ರಚಿತವಾದದ್ದೆಂದು ಒಪ್ಪಿಕೊಂಡರೆ, ಇದನ್ನು ಆತನು ತನ್ನ ತಾರುಣ್ಯದಲ್ಲಿ ವಿವಿಧ ವೃತ್ತರಚನೆಯಲ್ಲಿ ಕೈಯನ್ನು ಪಳಗಿಸುವುದಕ್ಕೋಸ್ಕರ ಬರೆದನೆನ್ನಬಹುದು.

ಜನ್ನನ ಪ್ರಸಿದ್ಧ ಕಾವ್ಯಗಳು ಎರಡು : 'ಯಶೋಧರ ಚರಿತೆ' (ಕ್ರಿ. ಶ. ೧೨೦೯) ಮತ್ತು 'ಅನಂತನಾಥಪುರಾಣ' (ಕ್ರಿ. ಶ. ೧೨೩೦). ಇವುಗಳಲ್ಲಿ ಯಶೋಧರಚರಿತೆ "ಜೈನದೀಕ್ಷೆಗೆ ಒಂದು ಸಣ್ಣ ಕೈಪಿಡಿ." "ಶ್ರಾವಕಜನದುಪ

[1] ಮೈಸೂರು ಓರಿಯೆಂಟಲ್ ಲೈಬ್ರರಿಯಲ್ಲಿರುವ ಈ ಗ್ರಂಥದ ಕೈ ಬರಹದ ಪ್ರತಿಯನ್ನೂ ಅದು ಜನ್ನಕರ್ತೃಕವಾಗಿರಬೇಕೆಂಬ ಅಂಶವನ್ನೂ ನನ್ನ ಗಮನಕ್ಕೆ ತಂದು ಕೊಟ್ಟವರು ನನ್ನ ಮಿತ್ರರಾದ ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್, ಎಂ. ಎ. ಅವರು.

ವಾಸಂ ಜೀವದಯಾಷ್ಟಮಿಯೊಳಾಗೆ,ಪಾರಣೆ ಕಿವಿಗಳ್ಗೆ" ಆಗುವಂತೆ "ಜೀವದಯೆ ಜೈನಧರ್ಮಂ" ಎಂಬ ತತ್ತ್ವವನ್ನು ನಿರ್ದೇಶಿಸುವ ಉದಾತ್ತೋಪಾಖ್ಯಾನವೇ ಇದರ ವಸ್ತು. ಅನಂತನಾಥಪುರಾಣವಂತೂ ಹದಿನಾಲ್ಕನೆಯ ತೀರ್ಥಂಕರನ ದಿವ್ಯಚರಿತ್ರೆಯನ್ನು ವರ್ಣಿಸಿ "ಬಾಟ ಬಟ್ಟೆ"ಯನ್ನು ತೋರಿಸುವ ಪುಣ್ಯ ಕಥೆ; "ಜಾರಚೋರ ವೀರರ ಕಥೆಯಂತೆ ಬಾಯ್ಸವಿಯ ಮಾತುಗಳಂ ಬಱಿಕೆಯ್ಯು ಚರ್ಚಿಯಲ್ಲ." ಈ ಎರಡು ಕೃತಿಗಳನ್ನೂ ಜನ್ನನು ಪರಮ ಭಕ್ತಿಯಿಂದ ರಚಿಸಿರ ಬೇಕು. ಆದರೂ ಇವುಗಳಲ್ಲಿ ಅವನ ಶೃಂಗಾರ ಪ್ರಿಯತೆಗೆ ಹಲವು ನಿದರ್ಶನಗಳಿವೆ. ಕಾವ್ಯದ ಮೊದಲಲ್ಲಿ ದೇವತಾದಿ ಸ್ತುತಿಯನ್ನು ಮಾಡಿದ ಬಳಿಕ, ತಮ್ಮ ಪ್ರಜ್ಞೆ ಪದವಿಗಳನ್ನೂ ವಿದ್ಯೆ ವೈಭವಗಳನ್ನೂ ಹೇಳಿಕೊಳ್ಳುವುದು ಕನ್ನಡ ಕವಿಗಳ ಹಕ್ಕಷ್ಟೆ. ಜೊತೆಗೆ ತಮ್ಮ ರೂಪಲಾವಣ್ಯಗಳನ್ನೂ "ರಸಿಕತೆ"ಯನ್ನೂ ಮುಚ್ಚು ಮರೆಯಿಲ್ಲದೆ ವರ್ಣಿಸುವುದೂ ಕೆಲವರಲ್ಲಿ ಉಂಟು. ಈ ಪದ್ಧತಿಯನ್ನು ಪಂಪನಿಂದ ಕಲಿತು ಜನ್ನನು ಅವನಿಗಿಂತಲೂ ಒಂದು ಹೆಜ್ಜೆ ಮುಂದೆ ಹೋಗಿದ್ದಾನೆನ್ನ ಬಹುದು. ತಾನು ವೈಯಾಕರಣನೆಂದೂ ತರ್ಕವಿನೋದನೆಂದೂ ಹೇಳಿಕೊಳ್ಳುವ ಹಾಗೆಯೇ "ಭರತಸುರತಶಾಸ್ತ್ರವಿಳಾಸ"ನೆಂದೂ ಹೇಳಿಕೊಂಡಿದ್ದಾನೆ. "ಕವಿಭಾಳ ನೇತ್ರ"ನೆಂಬ ಬಿರುದಿನಮೇಲೆ ಅವನಿಗೆ ಎಷ್ಟು ಅಭಿಮಾನವೋ "ಅಭಿನವಮದನ" ನೆಂಬ ಬಿರುದಿನ ಮೇಲೂ ಅಷ್ಟೇ. ಇದರ ಮೇಲೆ, ತನ್ನಲ್ಲಿ ರಮಣಿಯರಿಗಿದ್ದ ಪರಮಾದರವನ್ನೂ ವ್ಯಾಮೋಹವನ್ನೂ ಸಂಕೋಚಪಡದೆ ವರ್ಣಿಸಿದ್ದಾನೆ; ಈ ಬಗೆಯ ಪ್ರಣಯ ರಹಸ್ಯಗಳಿಗೆ ಧಾರ್ಮಿಕ ಕಾವ್ಯದ ಅವತರಣಿಕೆ ಉಚಿತಸ್ಥಾನ ವಲ್ಲವೆಂಬುದನ್ನು ಕೂಡ ಮರೆತು ವರ್ಣಿಸಿದ್ದಾನೆ.

ತೀರ್ಥಂಕರನ ಚರಿತ್ರೆಯನ್ನು ನಿರೂಪಿಸುವಾಗಲೂ ಅಷ್ಟೇ. ಅಷ್ಟಾದಶವರ್ಣನೆ ಗಳಲ್ಲಿ ಕ್ರಮಪ್ರಾಪ್ತವಾಗಿ ಬರುವ ಶೃಂಗಾರಾಂಶಗಳನ್ನು ವಿವರಿಸುವುದರಲ್ಲಿ ಜನ್ನ ನಿಗೆ ಉತ್ಸಾಹ ಹೆಚ್ಚು. ವೀತರಾಗನಾದ ಅನಂತನಾಥನು ಕೂಡ ಲಲಿತನಾಯಕ ನಂತೆ ನಲ್ಲೆಯರೊಡನೆ ವನದಲ್ಲಿ ವಿಹರಿಸಿ ಜಲಕೇಳಿಯಾಡಿ, ಬೆಳುದಿಂಗಳಲ್ಲಿ ಉಚಿತ ಸಖರೊಡನೆ ನಗರದ ವೇಶ್ಯಾವಾಟಗಳಲ್ಲಿ ಸುತ್ತದಿದ್ದರೆ ತೀರದು; ಅಲ್ಲಿಯ ಸರಸಸಲ್ಲಾಪಗಳನ್ನು ವರ್ಣಿಸಿ, "ಸೊಡರ್ಗುಡಿಗೆಣ್ಣೆಯೆಱೆವಂತೆ ಬೆಲೆವೆಣ್ಗೆ ಕುಡು ವುದು ಹದಕೆ ಚದುರಿಗಂ" "ಇತ್ತೊಡೆ ಬೇಟಂ, ಈಯದೊಡೆ ಕಾಟಂ" ಎಂದು ಮೊದಲಾದ ವಿಟನೀತಿಯನ್ನು ಶ್ರವಣಮಾಡಿಸದಿದ್ದರೆ ಕವಿಗೆ ತೀರದು. ಇದೆಲ್ಲವೂ

ಮುಂದೆ ಬರತಕ್ಕ ನಿರ್ವೇದ ಭಾವಕ್ಕೆ, ಶಾಂತ ರಸಕ್ಕೆ, ಸವರಣೆಯೆಂದು ಅವನ ಆಶಯವಾಗಿರಬಹುದು. ಆದರೆ, ಓದುವ ಪಾಠಕನಿಗೆ ಇದು ವೈರಾಗ್ಯದ ಕೊತ್ತಳದ ಮೇಲೆ ಮನ್ಮಥನು ನಟ್ಟ ವಿಜಯಪತಾಕೆಯಂತೆ ಕಾಣಿಸುತ್ತದೆ.

ಹೀಗೆ ಜನ್ನನ ಕಾವ್ಯಗಳಲ್ಲಿ—ಮಿಕ್ಕ ಕವಿಗಳ ಕೃತಿಗಳಲ್ಲಿರುವಂತೆಯೇ—ಅಲ್ಲಲ್ಲಿ ಶೃಂಗಾರವು ಲಜ್ಜೆ ಮೀರಿ ಬೀದಿಗೆ ಬಂದಿರುವುದು ನಿಜ. ಆದರೆ, ಅದರ ಹೃದಯಗ್ರಹಣದಲ್ಲಿಯೂ ಅವನಿಗೆ ಅದ್ವಿತೀಯ ಸಾಮರ್ಥ್ಯವುಂಟು. ಸಾಮಾನ್ಯವಾಗಿ ಮಿಕ್ಕ ಕವಿಗಳು ಕಾಮಕೇಳಿಯನ್ನು ಮಾತ್ರ ಬಲ್ಲರು. ಜನ್ನನಿಗಾದರೆ ಪ್ರೇಮವೈಚಿತ್ರ್ಯವೂ ಅದರ ಗಭೀರತೆ ಭೀಷಣತೆಗಳೂ ಪೂರ್ಣವಾಗಿ ಅನುಭವಕ್ಕೆ ಬಂದಿರತಕ್ಕವು. ರತಿರಹಸ್ಯವನ್ನು ಬಣ್ಣಿಸುವುದಕ್ಕಿಂತಲೂ ಪ್ರಣಯ ಸಮಸ್ಯೆಯನ್ನು ಬಿಡಿಸುವುದರ ಕಡೆಗೇ ಅವನ ಆಸಕ್ತಿ ಹೆಚ್ಚು. ಅದೇ ಅವನ ವೈಶಿಷ್ಟ್ಯ —ಅವನ ಕಾವ್ಯದ ಸತ್ತ್ವ. ಯಶೋಧರಚರಿತೆ, ಅನಂತನಾಥಪುರಾಣ—ಈ ಎರಡು ಕಾವ್ಯಗಳ ಪ್ರಧಾನವಸ್ತು ಜೈನಪುರಾಣವೂ, ಪರಮರಸವು ಶಾಂತವೂ ಆದರೂ ಒಂದೊಂದರಲ್ಲಿ ಒಂದೊಂದು ಪ್ರಣಯಕಥೆಯನ್ನು ಅವನು ವಿಸ್ತರಿಸಿರುವುದೇ ಇದಕ್ಕೆ ಗುರುತು. ಜನ್ನನು "ಕವಿಚಕ್ರವರ್ತಿ"ಯೆಂಬ ಬಿರುದನ್ನು ಪಡೆದವನು. "ಕರ್ಣಾಟಕೃತಿಗೆ ಸೀಮಾಪುರುಷ"ನೆಂದು ಹೊಗಳಿಸಿಕೊಂಡವನು. ಅವನ ಕಾವ್ಯಗಳಲ್ಲಿ—ಮುಖ್ಯವಾಗಿ ರಸದೊರತೆಯಾದ ಯಶೋಧರಚರಿತೆಯಲ್ಲಿ—ಯಾವ ಭಾಗವನ್ನೂ ರಸಿಕರು ಕಡೆಗಣಿಸುವಂತಿಲ್ಲ. ಆದರೆ ಈ ಪ್ರಣಯ ಕಥೆಗಳ ನಿರೂಪಣೆಯಲ್ಲಿ ವ್ಯಕ್ತವಾಗುವ ಶಕ್ತಿಯೂ ಪ್ರಜ್ಞೆಯೂ ತನ್ಮಯತೆಯೂ ಇದೇ ಧಾಟಿಯಲ್ಲಿ ಇದೇ ಮಟ್ಟದಲ್ಲಿ ಈ ಕಾವ್ಯಗಳ ಮಿಕ್ಕ ಭಾಗಗಳಲ್ಲಿ ಗೋಚರಿಸುವುದು ವಿರಳ. ಯಶೋಧರಚರಿತೆಯಲ್ಲಿ ಅಮೃತಮತೀ ವೃತ್ತಾಂತ, ಅನಂತನಾಥ ಪುರಾಣದಲ್ಲಿ ಚಂಡಶಾಸನೋಪಾಖ್ಯಾನ,—ಇವೇ ಆಯಾ ಕಾವ್ಯಗಳ ತಿರುಳೆಂದು ಹೇಳಿದರೆ ತಪ್ಪಾಗಲಾರದು. ಈ ಎರಡು ಕಥೆಗಳಲ್ಲೂ ಜನ್ನನು ಪ್ರಣಯದ ಧಾಳಿಯನ್ನು ಅದ್ಭುತ ಕೌಶಲದಿಂದ ವರ್ಣಿಸಿದ್ದಾನೆ. ಈ ಕಥೆಗಳನ್ನು ಅವನು ಹೇಗೆ ಚಿತ್ರಿಸಿರುವನೆಂಬುದನ್ನು ಮೊದಲು ಅರಿತರೆ ಅಲ್ಲಿ ಒಡ್ಡಿರುವ ಪ್ರಣಯ ಸಮಸ್ಯೆಯ ವಿಶಿಷ್ಟತೆಯನ್ನು ಸುಲಭವಾಗಿ ಗ್ರಹಿಸಬಹುದು.

೨

'ಯಶೋಧರಚರಿತೆ'ಯಲ್ಲಿ ಕಥಾನಾಯಕನೂ ಅವನ ತಾಯಿಯೂ ಒಂದು ಮಾನಸಿಕ ಪಾಪದ ಸಲುವಾಗಿ ಹಲವು ಜನ್ಮಗಳನ್ನೆತ್ತಿ ಸಂಸಾರದಲ್ಲಿ ತೊಳಲಿ, ಕಡೆಗೆ ಸದ್ಗುರುಗಳ ಬಳಿ ದೀಕ್ಷೆಗೊಳ್ಳುವರು. ಇದೆಲ್ಲಕ್ಕೂ ಅಮೃತಮತಿಯ ವೃತ್ತಾಂತವೇ ತಳಹದಿ. ಯಶೋಧರನು ಉಜ್ಜಯಿನಿಯ ಅರಸು ; ಅಮೃತಮತಿ ಅವನ ಮನಃಪ್ರಿಯೆ. ಒಂದು ರಾತ್ರಿ ಮೇಲುಮಚ್ಚಿನ ಶಯ್ಯಾಗಾರದಲ್ಲಿ ನಲ್ಲನಲ್ಲೆಯರು ಪವಡಿಸಿ, ಅವರ ಕಣ್ಣನ್ನು ನಿದ್ದೆ ಬಿಗಿದಿರುವಾಗ, ಹತ್ತಿರದ ಗಜಶಾಲೆಯಿಂದ ಮಾವುತನೊಬ್ಬನ ಹಾಡು ಸುತ್ತಣ ನಿಶ್ಶಬ್ದತೆಯನ್ನು ಭೇದಿಸಿಕೊಂಡು ಮೇಲಕ್ಕೆ ಏರುವುದು. ಆ ಮಧುರಗಾನಕ್ಕೆ ಅಮೃತಮತಿಯ ನಿದ್ದೆ ಹಾಗೆಯೇ ಮೆಲ್ಲನೆ ತಿಳಿಯುವುದು. ಎಚ್ಚರಗೊಳ್ಳುವ ಮೊದಲೇ ತನ್ನ ಹೃದಯವನ್ನು ಸೋಕಿದ ಆ ಮಧುರಗಾನದ ಸವಿಗೆ ಸೋತು ಆ ರಮಣಿ "ಮುಟ್ಟಿದ ಮನಮಂ ತೊಟ್ಟನೆ ಪಸಾಯದಾನಂಗೊಟ್ಟಳ್." ಮಾವುತನು ಗಾನಾವೇಶದಲ್ಲಿ ರಾಗದ ಮೇಲೆ ರಾಗವನ್ನು ಅಪೂರ್ವ ಮಧುರವಾಗಿ ಹಾಡುತ್ತಿರಲು, ಕೇಳುತ್ತ ಕೇಳುತ್ತ, ಬೆಳಗಾಗುವುದರೊಳಗೆ ರಾಣಿಗೆ ಆ ಹಾಡುಗಾರನನ್ನು "ನೋಡುವ, ಕೂಡುವ ಚಿಂತೆ ಕಡಲ್ವರಿದುದು." ಒಂದೇ ಒಂದು ಜಾವದಲ್ಲಿ ಹೀಗೆ ಅನಿರೀಕ್ಷಿತವಾಗಿ ಉಕ್ಕಿದ ಮೋಹವನ್ನು ತಡೆಯಬೇಕೆಂಬ ಪ್ರವೃತ್ತಿಯೇ ಅಮೃತಮತಿಗೆ ಹುಟ್ಟಿದಂತೆ ತೋರುವುದಿಲ್ಲ. ಬೆಳಗಾದಕೂಡಲೇ, ಆ ನೂತನ ಪ್ರಿಯನ ಬಳಿಗೆ ತನ್ನ ಆಪ್ತ ಸಖಿಯನ್ನು ಕಳಿಸುವಳು. ಅವಳು ಆ ಅಷ್ಟವಂಕನ ರೂಪನ್ನು ಕಾಣುತ್ತಲೇ ಹೇಸಿ, ಅಂಥ ಅಪಾತ್ರನಲ್ಲಿ ಸುರಸುಂದರಿಯಾದ ತನ್ನ ಒಡತಿಯ ಮನಸ್ಸನ್ನು ಸೇರಿಸಿದ ಕಣ್ಣಿಲ್ಲದ ವಿಧಿಯನ್ನು ಹಳಿಯುತ್ತಾ ಹಿಂದಿರುಗುವಳು.

ಅವಳ ದಾರಿಯನ್ನೇ ಅಮೃತಮತಿ ವಿಷಣ್ಣವದನದಿಂದ ಕಾಯುತ್ತಿದ್ದಾಳೆ. ಆಕೆಯ ಅವಸ್ಥೆಯನ್ನು ದೂತಿ ಕಂಡು ಹೊಟ್ಟೆ ಹಿಡಿಯದೆ, "ಇಂತಪ್ಪ ಕಾಮದೇವಂಗೆಂತೆಂತಾಯ್ದುರಸಿ ಕೂರ್ತೆ !" ಎಂದು ಕಟಕಿ ಮಾತನ್ನಾಡಿದರೂ ಮೇರೆ ಮೀರಿದ ವ್ಯಾಮೋಹದಿಂದ ಕಂಗೆಟ್ಟ ಅಮೃತಮತಿಗೆ ಅದರ ವ್ಯಂಗ್ಯವೇ ಹೊಳೆಯುವುದಿಲ್ಲ. ತನ್ನ ನಲ್ಲನು ನಿಜವಾಗಿಯೂ ಕಾಮದೇವನೆಂದೇ ಬಗೆದು, "ಹೇಳು, ಹೇಳು ; ಪ್ರಿಯನು ಅಂಥ ಚೆಲುವನೆ ? ದೂತಿ, ನೀನು ನನ್ನನ್ನು ಕೊಂದೆ !"

ಎಂದು ಅಧೀರಳಾಗಿ ನರಳುವಳು. ರಾಣಿಯು ವಿವೇಕವಿಕಲತೆಯನ್ನು ಕಳೆಯುಬೇಕೆಂದು, ಆ ಸುಂದರನ ಅಂಗಸೌಷ್ಠವವನ್ನು "ಪಱಿದಲೆ....ನೊಱೆವಾಯ್....ಬಿಬ್ಬಿಱುವಲ್....ಪೊಱಂಟೆ ಬೆನ್...." ಎಂದು ಮೊದಲಾಗಿ ಜುಗುಪ್ಸೆಯ ಎಲ್ಲೆ ಮೀರುವಂತೆ ಕೆಳದಿ ವರ್ಣಿಸುವಳು. ಇಲ್ಲಿ ಅಮೃತಮತಿಯ ಪರಿಸ್ಥಿತಿ ಎಲ್ಲರನ್ನೂ—ಕವಿಯನ್ನು ಕೂಡ—ಮರುಗಿಸುತ್ತದೆ. ಪ್ರಿಯನು ಯಾರೆನ್ನುವುದನ್ನೂ ಅರಿಯದೆ ಅವನ ದನಿಗೆ ಮರುಳಾಗಿ ಆಕೆ ತನ್ನ ಹೃದಯವನ್ನು ಅರ್ಪಿಸಿದಳು; ಮೋಹಜ್ವರದ ಶಾಂತಿಗಾಗಿ ಧರ್ಮಾಧರ್ಮಗಳನ್ನು ಕೂಡ ಮರೆತು ಅವನ ಬಳಿಗೆ ದೂತಿಯನ್ನು ಕಳಿಸಿದಳು. ಈಗ ಕೇಳಿದರೆ, ಇನಿಯನ ರೂಪು ಅತಿ ಘೋರ; ಅದಕ್ಕೆ ಇನ್ನೂ ಕಪ್ಪು ಬಳಿದು ಸಖಿ ವಿಕಾರವಾಗಿ ವರ್ಣಿಸುತ್ತಿದ್ದಾಳೆ. ವಿಧಿ, ಮನ್ಮಥ, ಪ್ರಿಯನ ರೂಪು, ತನ್ನ ದೂತಿ—ಎಲ್ಲರೂ ತನಗೆ ಶತ್ರುಗಳಾದರು. ಇಷ್ಟಾದರೂ ತೆತ್ತ ಮನಸ್ಸನ್ನು ಹಿಂದಿರುಗಿಸಬೇಕೆಂದರೆ ಆಗದು. "ಗರಗರಿಕೆ ಕೊರಲೊಳ್, ಈಕ್ಷಣದೊಳ್ ವಾರ್ಬಿಂದು, ಮಿಡುಕು ಎರ್ದೆಯೊಳ್ ಒದವೆ, ಪುಳಿಂದನ ಕಣೆಗಟ್ಟನಿಂದ ವನಹರಿಣಿ" ಯಂತೆ ಅವಳು ಕೆಳದಿಗೆ ಎದುರು ನಿಂತು, "ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್!" "ಒಲವಾದೊಡೆ ರೂಪಿನ ಕೋಟಲೆಯೇವುದೊ!" ಎಂದು ಪ್ರೇಮಯೋಗದ ಮಹಾಮಂತ್ರಗಳನ್ನು ಅಚಲ ಮನಸ್ಸಿನಿಂದ ಸಾರುವಳು. ಅಷ್ಟವಂಕನೇ ಅವಳಿಗೆ ಈಗ "ಕಾಮದೇವಂ, ಇಂದ್ರಂ, ಚಂದ್ರಂ." ಲಂಚಕೊಟ್ಟು ದೂತಿಯನ್ನು ವಶಪಡಿಸಿಕೊಂಡು, ಅವಳ ಸಹಾಯದಿಂದ ಆ ಮಾವುತನಲ್ಲಿ ನೆರೆಯತೊಡಗುವಳು.

ಆ ಕುರೂಪಿಯ ಸಹವಾಸದಲ್ಲಿ ಅಮೃತಮತಿಗೆ ಮೆಚ್ಚಿಕೆ ಬೆಳೆದಂತೆಲ್ಲಾ ತನ್ನ ಪತಿಯಲ್ಲಿ ಮನಸ್ಸು ಇಳಿಕೆಯಾಯಿತು—"ಬೇವಂ ಮೆಚ್ಚಿದ ಕಾಗೆಗೆ ಮಾವಿಳದಪ್ಪಂತೆ." ಆದರೂ, ಇನ್ನು ತನಗೊಲ್ಲದ ಗಂಡನನ್ನು ತೊರೆದು, ಕಾಮಿಸಿದ ನಲ್ಲನನ್ನು ಪ್ರಕಟವಾಗಿ ಕೂಡುವ ಧೈರ್ಯವಿಲ್ಲ ಅವಳಿಗೆ. ಸಾಮಾನ್ಯ ಜಾರಸ್ತ್ರೀಯಂತೆ ಗುಪ್ತವಾಗಿ ತನ್ನ ಪ್ರಿಯನ ಬಳಿಗೆ ಹೋಗಿಬರುತ್ತಿದ್ದಳು. ಆದರೆ ಒಲಿದವರ ಕಣ್ಣು ಬಲು ಚುರುಕು. ಅಮೃತಮತಿಯ ನಡತೆ ಹಿಂದಿನಂತಿಲ್ಲವೆಂದು ಯಶೋಧರನಿಗೆ ಸಂಶಯ ಹುಟ್ಟಿತು. ಅವಳನ್ನು ಪರೀಕ್ಷಿಸಬೇಕೆಂದು ಒಂದು ರಾತ್ರಿ ನಿದ್ದೆ ಬಂದವನಂತೆ ನಟಿಸಿ ಮಲಗಿರಲು, ಆ ಅವಕಾಶವನ್ನೇ ಕಾಯುತ್ತಿದ್ದ ಅರಸಿ ಗಂಡನ "ತೋಳ್ಸೆಱೆಯಿಂ ನುಸುಳ್ದು" ಜಾರನ ಬಳಿಗೆ ಹೊರಟಳು.

(ಮೊದಲು ಹೃದಯಪ್ರಿಯನಾಗಿದ್ದವನ ಆಲಿಂಗನವು ಈಗ ತೋಳ ಸೆರೆಯಾಯಿತು!) ಹಿರಿದ ಕತ್ತಿಯೊಡನೆ ಅರಸನೂ ಪ್ರಚ್ಛನ್ನವಾಗಿ ಅವಳ "ಬೆನ್ನೊಳಿ ಪೋದಂ–ದೋಷದ ಬೆನ್ನೊಳಿ ಸಂಧಿಸುವ ದಂಡದಂತೆ." ಇತ್ತ ಅರಸಿ ತಡಮಾಡಿ ಬಂದದ್ದಕ್ಕೇ ಅಷ್ಟವಂಕನು ಕೋಪಗೊಂಡಿದ್ದಾನೆ. ಅವಳು ಪ್ರೀತಿಯಿಂದ ತಂದ ಕುಸುಮ ತಾಂಬೂಲಗಳನ್ನು ಒರಟೊರಟಾಗಿ ಕೆದರಿ, ಕುರುಳನ್ನು ಎಳೆದು ಜಗ್ಗಿಸಿ, ತನ್ನ ಚಾವಟಿಯಿಂದ ಅವಳನ್ನು ಬಡಿಯುತ್ತಿದ್ದಾನೆ, ಬಿರಿದ ಕಾಲಿನಿಂದ ಒದೆಯುತ್ತಿದ್ದಾನೆ. ರಸಿಕತೆಯ, ಕೋಮಲತೆಯ ಗಂಧವೇ ಇಲ್ಲದ ಆ ಪಶು ಸುಕುಮಾರಿಯಾದ ತನ್ನನ್ನು ಹೀಗೆ ನಿಷ್ಕಾರಣವಾಗಿ ದಂಡಿಸಿದರೂ ಆ ಘಾತುಕನ ಮೇಲೆ ಅಮೃತಮತಿಗೆ ಕೋಪವೆ? ಅವನ ಕಾಲ ಮೇಲೆ ದೈನ್ಯದಿಂದ ಬಿದ್ದು, ಇಲ್ಲದ ತಪ್ಪನ್ನು ಒಪ್ಪಿಕೊಂಡು, ಅವನ ಹೊರತು ಮಿಕ್ಕ ಪುರುಷರೆಲ್ಲರೂ —ತನ್ನ ಗಂಡನು ಕೂಡ ಸೋದರ ಸಮಾನರೆಂದು ನಂಬಿಕೆ ಕೊಡುತ್ತಿದ್ದಾಳೆ. ಅವಳದು ಪಾಪಕರ್ಮವೆಂದರಿತಿದ್ದರೂ ಇಲ್ಲಿ ಅವಳ ಅಶರಣತೆಯನ್ನು ನೋಡಿ ನಮ್ಮ ಕರುಳು ಹಿಂಡುತ್ತದೆ.

ಈ ಕಡೆ, ಮರೆಯಲ್ಲಿ ನಿಂತು ಇದೆಲ್ಲವನ್ನೂ ನೋಡುತ್ತಿದ್ದ ಯಶೋಧರನ ಮನಸ್ಸು ಹೇಗಾಗಿರಬೇಕು! ಆಗ ಥಟ್ಟನೆ "ಬಾಳ್ ನಿಮಿರ್ದುದು, ತೋಳ್ ತೂಗಿದುದು, ಮನಂ ಕನಲ್ದುದು!" ಇನ್ನೇನು ಕ್ರೋಧಾವೇಶದಲ್ಲಿ ಇಬ್ಬರನ್ನೂ ಸೀಳಿ ಹೋಳುಮಾಡಿಬಿಡಬೇಕು—ಅಷ್ಟರಲ್ಲಿ ಧೃತಿ ಬಂದು ಕೈತಡೆಯಿತು. ಆ ಹುಳುಕರನ್ನು ಕೊಲ್ಲುವುದಕ್ಕೂ ಅವನು ಹೇಸಿದನು. ಇರಿದ ಮಾತ್ರಕ್ಕೆ ಇವರಿಬ್ಬರ ಮೋಹ ಮುರಿಯುತ್ತದೆಯೆ? ಹೆಣ್ಣು ತಪ್ಪಿ ನಡೆದರೆ ಅವಳನ್ನು ತೊರೆದು ಬಿಡುವುದೇ ವಿಜಯ—ಎಂಬ ವಿವೇಕವುದಿಸಿತು. ಹೀಗೆ ಪತ್ನೀತ್ಯಾಗವನ್ನು ನಿಶ್ಚಯಿಸಿ ಯಶೋಧರನು ಅಲ್ಲಿ ನಿಲ್ಲದೆ ಬಂದು ಮುನ್ನಿನಂತೆ ಪವಡಿಸುವನು. ಅಮೃತಮತಿಯೂ ಹಿಂದಿರುಗಿ, ಗಂಡನು ನಿದ್ದೆ ಹೋಗುತ್ತಿರುವನೆಂದು ಭಾವಿಸಿ, ಸದ್ದಾಗದಂತೆ ಮಂಚವನ್ನೇರಿ ಸ್ವಲ್ಪ ದೂರದಲ್ಲಿ ಮಲಗುವಳು. ಹಿಂದೆ ಯಶೋಧರನಿಗೆ "ಮುಟ್ಟಿದೊಡೆ ಸುಖದ ಸೋಂಕಂ ಪುಟ್ಟಿಸು" ತ್ತಿದ್ದವಳು ಅವಳು; ಈಗ ಅಷ್ಟವಂಕನ "ತೋಳ್ಮುಟ್ಟಿದ" ಮೇಲೆ—ಹುಳಿಮುಟ್ಟಿದ ಹಾಲಿನಂತಾದ ಮೇಲೆ—ಅವಳ ಮೈ ತನ್ನ ಬೆನ್ನಿಗೆ ಆಕಸ್ಮಿಕವಾಗಿ ಸೋಕಿದ ಮಾತ್ರಕ್ಕೆ ಕರ್ಕಶಸ್ಪರ್ಶವಾಗುವುದು; ಅವನ ಮನಸ್ಸು ಅಷ್ಟು ಮಾರ್ಪಟ್ಟಿರುವುದು. ಆ ರಾತ್ರಿಯೆಲ್ಲಾ

ಅವನು ವಿಕಲ್ಪಶತದಲ್ಲಿ ಹೊರಳಾಡಿ, ಇನ್ನು ಒಲಿಸುವ ಒಲಿಯುವ ಮಾತನ್ನು ದೂರ ನೂಕಿ, ಮುಕ್ತಿಸಾಧನೆಯೊಂದೇ ತನಗುಳಿದ ಕರ್ತವ್ಯವೆಂದು ನಿರ್ಧರಿಸುವನು.

ಆದರೆ ವಿಧಿ ಅವನನ್ನು ಮುಕ್ತಿಸಾಧನೆಗೆ ಬಿಡಲೊಲ್ಲದು. ಮರುದಿನ ಬೆಳಗ್ಗೆ ತನ್ನ ತಾಯಿ ಬಳಿಗೆ ಹೋಗಿ ರಾಣಿಯ ದುರ್ವರ್ತನೆಯನ್ನು ಒಂದು ಕನಸಿನ ನೆವದಿಂದ ಸೂಚಿಸಲು, ಅವಳು ಅದರ ತಾತ್ಪರ್ಯವನ್ನು ಅರಿತುಕೊಳ್ಳದೆ, ದುಃಸ್ವಪ್ನಶಾಂತಿಗಾಗಿ ಮಾರಿಗೆ ಒಂದು ಬಲಿ ಕೊಡಬೇಕೆಂದು ಹಠ ಹಿಡಿಯುವಳು. ಯಶೋಧರನು ತಾಯಿ ಇಷ್ಟವನ್ನು ಮೀರಲಾರದೆ, ಜೀವಹಿಂಸೆಗೆ ಮನಸ್ಸು ಬಾರದೆ, ಒಂದು ಹಿಟ್ಟಿನ ಕೋಳಿಯನ್ನು ಬಲಿಕೊಡುತ್ತಿರಲು ಅದರೊಳಗೆ ಅಡಗಿದ್ದ ಒಂದು ಬೆಂತರನಿಗೆ ಘಾಸಿಯಾಗುವುದು. ಪಾಪದ ಸಂಕಲ್ಪ ಕೂಡ ಹೀಗೆ ಪರಿಣಮಿಸಿದ್ದರಿಂದ ಉದ್ವೇಗ ಇನ್ನೂ ಹೆಚ್ಚಿ ತಾಯಿಮಕ್ಕಳು ಎಲ್ಲವನ್ನೂ ತ್ಯಜಿಸಿ ತಪಸ್ಸಿಗೆ ಹೊರಡಲು ಅನುವಾಗುವರು. ಆದರೆ ಅಮೃತಮತಿ ಅವರ ಬಳಿಗೆ ಮಾರಿಯಂತೆ ಬರುವಳು. ಈ ವೇಳೆಗೆ ಅವಳು ತುಂಬ ದುಷ್ಟೆಯಾಗಿದ್ದಾಳೆ. ಆ ದಿನ ಬೆಳಗ್ಗೆ ನಡೆದ ಒಂದು ಪ್ರಸಂಗದಿಂದ ತನ್ನ ಗುಟ್ಟೆಲ್ಲವೂ ಗಂಡನಿಗೆ ಬಯಲಾಯಿತೆಂದು ಅರಿತು, ಆ ಅಪಮಾನದ ಸೇಡನ್ನು ತೀರಿಸಿಕೊಳ್ಳಲು ಕಾದಿದ್ದಾಳೆ. ಯಶೋಧರನನ್ನು ಬಿಟ್ಟಿರಲಾರದವಳಂತೆ ಕಪಟಭಕ್ತಿಯ ಮಾತನ್ನಾಡಿ, ತಪೋವನಕ್ಕೆ ಹೊರಡುವ ಮೊದಲು ತನ್ನ ಮನೆಯಲ್ಲಿ ಅತ್ತೆಯೂ ಗಂಡನೂ ಆರೋಗಿಸಬೇಕೆಂದು ಬೇಡಿಕೊಳ್ಳುವಳು. ಸಂಸಾರವನ್ನು ತೊರೆಯುವ ವೇಳೆಯಲ್ಲಿ ಕಳೆದ ಕಿಲ್ಬಿಷಗಳ ಸ್ಮರಣೆಯೇಕೆಂದೋ ಏನೊ, ಯಶೋಧರನು "ಮನವಲ್ಲದ ಮನದೊಳೊಡಂಬಟ್ಟು" ತಾಯೊಡನೆ ಬಂದು ಊಟ ಮಾಡುವಾಗ, ಆ ಪಾತಕಿ ಬಡಿಸಿದ ನಂಜಿನ ಲಡ್ಡುಗೆಯನ್ನು ಸವಿದು ಇಬ್ಬರೂ ಮೃತರಾಗುವರು. ಬಳಿಕ ತಮ್ಮ ಮಾನಸಿಕ ಪಾಪದ ಫಲವಾಗಿ ಅವರಿಬ್ಬರೂ ತಿರ್ಯಗ್ಯೋನಿಯಲ್ಲಿ ಆರಾರು ಸಲ ತೊಳಲಬೇಕಾಗುವುದು. ಹಾಗೆ ಜನ್ಮಾಂತರಗಳನ್ನೆತ್ತಿದಾಗಲೂ, ಯಶೋಧರನನ್ನು ಪತ್ನೀಸಂಬಂಧದ ಈರ್ಷ್ಯೆ ವ್ಯಥೆಗಳು ಒಂದೆರಡು ಸಲ ಬೆನ್ನಂಟದೆ ಬಿಡುವುದಿಲ್ಲ.

ಇನ್ನು ಅಮೃತಮತಿ ಯಾವ ನಾಚಿಕೆಯೂ ಯಾರ ಅಂಜಿಕೆಯೂ ಇಲ್ಲದೆ ತನ್ನ ಜಾರನೊಡನೆ ಸ್ವೇಚ್ಛೆಯಿಂದ ವಿಹರಿಸುವಳು. ಅವನ ಸಹವಾಸದಿಂದ

ಅವಳಿಗೆ ತೊನ್ನುಬಡಿಯುವುದು; ದೇಹವು ವ್ರಣಮಯವಾಗುವುದು. ಕುತ್ಸಿತ ವಿಷಯೋಪಭೋಗದಲ್ಲಿ ಅವಳಿಗೆ ಆಸೆ ಬಲಿಯುತ್ತಾ ಹೋಗುವುದು. ಸೇವೆಯ ದಾಸಿಯರು ಕೂಡ ಅವಳ ದುಷ್ಕೃತ್ಯಗಳಿಗೂ ದುರ್ಲಾಲಸೆಗಳಿಗೂ ಹೇಸಿ, "ಪಾತಕಿ ಪುೞಿತಲ್ಲದೊಡೇಂ ಸತ್ತಪಳೇ!" "ಇದೇಂ ನಾಯಕನರಕವಿಾಕೆಗೊಚ್ಚತವಾಯ್ತೋ!" ಎಂದು ಆಡಿಕೊಳ್ಳುವರು. ಕಡೆಗೆ ಆ ಪ್ರಕಾರವೇ ಅವಳು ಧೂಮಪ್ರಭೆಯೆಂಬ ಪಂಚಮ ನರಕಕ್ಕಿಳಿದು ತನ್ನ ಕಥೆಯನ್ನು ಮುಗಿಸುವಳು.

ಸ್ವರ್ಗೀಯ ಸೌಂದರ್ಯವನ್ನೂ ಹೃದಯವಲ್ಲಭನಾದ ಪತಿಯನ್ನೂ ಹೊಂದಿ ದೇವಿಯಂತಿದ್ದ ಅಮೃತಮತಿ ಅದಮ್ಯವಾದ ಮೋಹಕ್ಕೆ ಬಲಿಯಾಗಿ, ಹೇಗೆ ಶೀಲವಳಿದಳು, ಗುಣವಳಿದಳು, ರೂಪವಳಿದಳು, ನಾಯಕನರಕಕ್ಕಿಳಿದಳು—ಎಂಬುದನ್ನು ಜನ್ನನು ಈ ರೀತಿ ನಿರೂಪಿಸಿದ್ದಾನೆ; ಅವಳ ಅಧೋಗತಿಯ ಹೆಜ್ಜೆಹೆಜ್ಜೆಯನ್ನೂ ಸೂಕ್ಷ್ಮದೃಷ್ಟಿಯಿಂದ, ಅನುಪಮ ಶಕ್ತಿಯಿಂದ ಚಿತ್ರಿಸಿದ್ದಾನೆ. ಜೊತೆಗೆ ಅವಳ ಗಂಡನಾದ ಯಶೋಧರನ ಕ್ರೋಧವೂ, ಧೃತಿಯೂ, ವಿತರ್ಕವೂ, ನಿರ್ಧಾರವೂ, ಅವನ ಮನೋನಿಗ್ರಹವನ್ನೂ ಮಿೀರಿ ಬಂದ ಭವಬದ್ಧವಾದ ಈರ್ಷ್ಯೆಯೂ—ಅಷ್ಟೂ ನಮ್ಮ ಕಣ್ಣಿಗೆ ಕಟ್ಟುವಂತೆ ಎತ್ತಿ ಹಿಡಿದಿದ್ದಾನೆ. ಈ ಕಥಾಂಶವನ್ನು ಗದ್ಯದ ಸಪ್ಪೆಮಾತುಗಳಿಂದ ಮೇಲೆ ಸೂಚಿಸಿರುವುದು ಕೇವಲ ಧೃಷ್ಟತನ. ಯಶೋಧರಚರಿತೆಯನ್ನೇ ಮೊದಲಿನಿಂದ ತುದಿಯವರೆಗೆ ಓದಿದರೆ ಮಾತ್ರ ಅದರ ಔಜ್ಜ್ವಲ್ಯವನ್ನೂ ಪರಿಪಾಕವನ್ನೂ ಅರಿಯುವುದು ಸಾಧ್ಯ.

೩

ಇನ್ನು ಅನಂತನಾಥಪುರಾಣದ ಕಡೆಗೆ ತಿರುಗೋಣ. ಯಶೋಧರಚರಿತೆಯಲ್ಲಿ ಮುಖ್ಯ ಕಥೆಯೂ ಅಮೃತಮತಿಯ ಪ್ರಣಯವೃತ್ತಾಂತವೂ ಹಾಸುಹೊಕ್ಕಿನಂತೆ ನೆಯ್ದುಕೊಂಡಿವೆ. ಇಲ್ಲಾದರೆ, ಸುಪ್ರಭೆ ಪುರುಷೋತ್ತಮರ ಕಥೆ ತೀರ್ಥಂಕರಚರಿತೆಗೆ ಒಂದು ಪರಿಶಿಷ್ಟದಂತೆ ಬರುತ್ತದೆ; ಅನಂತನಾಥಸ್ವಾಮಿಯ ಸಮವಸರಣ ಮಂಡಪದಲ್ಲಿ ಗಣಧರರೊಬ್ಬರು ಈ ಕಥೆಯನ್ನು ನಿರೂಪಿಸಿದರೆಂಬುದು ಹೊರತು, ಇದಕ್ಕೂ 'ಅನಂತನಾಥಪುರಾಣ'ಕ್ಕೂ ಯಾವ ಸಂಬಂಧವೂ ಇಲ್ಲ. ತನಗೆ ಮನಸ್ಸಿಲ್ಲದಿದ್ದರೆ ಯಾವ ಆಕ್ಷೇಪಣೆಗೂ ಒಳಗಾಗದೆ ಜನ್ನನು

ಈ ಪ್ರಸಂಗವನ್ನು ಕೈಬಿಡಬಹುದಾಗಿದ್ದಿತೇನೊ. ಆದರೆ ಅದು ಸ್ತ್ರೀನಿಮಿತ್ತಕವಾಗಿ ರಸಗರ್ಭಿತವಾಗಿದ್ದುದರಿಂದ ಎತ್ತಿಕೊಂಡು, ಈ ಉಪಾಖ್ಯಾನವನ್ನು ಪ್ರಧಾನ ಕಥೆಗಿಂತಲೂ ಹೆಚ್ಚು ರಮ್ಯವಾಗಿ ವಿಸ್ತರಿಸಿದಂತೆ ತೋರುತ್ತದೆ. ಇಲ್ಲಿ ನಮಗೆ ಪ್ರಕೃತವಾದದ್ದು ಅದರ ಜೀವವಾದ ಚಂಡಶಾಸನ ಪ್ರಣಯ ಕಥೆ.

ಸುರಮ್ಯಮಂಡಳದ ಪೌದನಪುರಕ್ಕೆ ವಸುಷೇಣನು ಪ್ರಭು. ಅವನ ರಾಣಿಯ ವಾಸದ ಹೆಂಡಿರಲ್ಲಿ—ಅಪ್ಸರೆಯರೆಲ್ಲರ ಸೊಬಗನ್ನು ಮೀರಿಸಲು ಒಬ್ಬೊಬ್ಬಳೇ ಸಾಕೆನ್ನಿಸುವ ಐನೂರ್ವರು ಚೆಲುವೆಯರಲ್ಲಿ—ಸುನಂದೆ ವಸುಷೇಣನಿಗೆ ಅಚ್ಚು ಮೆಚ್ಚಾದ ಮಹಾದೇವಿ; ಅವಳ ಯೌವನ ಲಾವಣ್ಯಗಳಲ್ಲೇ ಆತನ ಕಣ್ಣುಗಳಿಗೆ ತೃಪ್ತಿ. ಒಂದು ದಿನ ವಸುಷೇಣನು ಗಜಾರೋಹಣ ವಿನೋದದಲ್ಲಿರುವಾಗ ತನ್ನ ಪ್ರಾಣಮಿತ್ರನಾದ ಚಂಡಶಾಸನನು ತನ್ನನ್ನು ನೋಡಲು ಬರುತ್ತಿದ್ದಾನೆಂದು ಕೇಳಿದನು. ಇಬ್ಬರೂ ಬಾಲ್ಯದಲ್ಲಿ ಒಟ್ಟಿಗೆ ಧೂಳಾಟವಾಡಿದ ಜೊತೆಗಾರರು. ಹಲವು ದಿನಗಳ ಅಗಲಿಕೆಯಿಂದ ನೊಂದು ತನ್ನನ್ನು ನೆನೆದುಕೊಂಡು ಬರುತ್ತಿರುವ ಈ ಗೆಳೆಯನನ್ನು ವಸುಷೇಣನು ಸಂಭ್ರಮದಿಂದ ತನ್ನ ಅರಮನೆಗೆ ಕರೆತರುವನು. ಅವನ ಸಂತೋಷಕ್ಕಾಗಿ ಕಾವ್ಯಗೋಷ್ಠಿಯೇನು,ಗೀತನಾಟ್ಯಗಳೇನು, ಜಟ್ಟಿಕಾಳಗವೇನು, "ವಾಹವಿಳಾಸ ಕಂದುಕಕೇಳಿ" (=ಪೋಲೋ ಆಟ) ಗಳೇನು! ಈ ಆದರ ಎಲ್ಲಿಗೆ ಮುಟ್ಟುವುದೆಂದರೆ, ಮಿತ್ರರಿಬ್ಬರಿಗೂ ಏಕಸದನ ವಾಸ, ಸಹವಿಳಾಸಕ್ರೀಡೆ, ಸಹಪಂಕ್ತಿಭೋಜನ. ಇಬ್ಬರಿಗೂ ಊಟಕ್ಕೆ ಬಡಿಸುವವಳು ವಸುಷೇಣನ ಪ್ರಿಯತಮೆಯಾದ ಸುನಂದಾ ಮಹಾದೇವಿ.

ಸುನಂದೆ "ಕುಸುಮಕೋದಂಡನ ವಶೀಕರಣಕಾಂಡಂ ಕೀಲ್ಮಿಸೆಯಿಟ್ಟು ಗಱಿಗಟ್ಟಿ ಶಿರ್ದಿ ಬಣ್ಣವಿಟ್ಟಂತೆ"ಒಪ್ಪುವವಳು. ಅವಳ ಅಪೂರ್ವಲಾವಣ್ಯವೂ ವಿಳಾಸ ಪ್ರೌಢಿಮೆಗಳೂ ಚಂಡಶಾಸನನ ಕಣ್ಣನ್ನು ಕತ್ತಲಿಡಿಸಿ ಬಗೆಯನ್ನು ಸೂರೆಗೊಳ್ಳುವುವು. ಊಟಕ್ಕೆ ಕುಳಿತಾಗ ಸುನಂದೆ ಬಡಿಸುತ್ತಿರಲು ಅವಳ ಅಂಗಾಂಗ ಸೌಂದರ್ಯವನ್ನು ಹತ್ತಿರದಲ್ಲಿ ನೋಡಿ ಭ್ರಮಿಸಿ, ಅವನು ತುತ್ತನ್ನು ಕೂಡ ಸರಿಯಾಗಿ ತೆಗೆದುಕೊಳ್ಳಲಾರದೆ ಹೋಗುವನು. ಅವಳಿಗೆ ಇಷ್ಟು ಸಮೀಪದಲ್ಲಿರುತ್ತಿದ್ದರೂ "ಸೋಂಕುವಾಸೆ" ಕೈಗೂಡದೆ, ಅವನ ಮೋಹಜ್ವರವು ದಿನದಿನಕ್ಕೆ ಬೆಳೆದು ಯಾವ ಶೈತ್ಯೋಪಚಾರಕ್ಕೂ ಸಗ್ಗದೆ ಹೋಗುವುದು; ಕಡೆಗೆ ಮರೆಮಾಜಲು ಕೂಡ ಕಷ್ಟವಾಗುವುದು. ತನ್ನ ನರ್ಮಸಚಿವನಾದ ಸುದರ್ಶನ

ನೆಂಬುವನು ಈ ಅವಸ್ಥೆಯನ್ನು ಅರಿತೂ ಅರಿಯದವನಂತೆ ಬೆಸಗೊಳ್ಳಲು, ಚಂಡಶಾಸನನು "ಈ ಕಡುನಂಟನ ಸತಿಯ ರೂಪು ಸೋಲಿಸಿತೆನ್ನಂ" ಎಂದು ರಹಸ್ಯವನ್ನು ಬಿಚ್ಚಿಹೇಳಿ, "ರಮಣೀಲೋಚನಚುಂಬನಂ ಕಳೆಗುಮೇ ನಟ್ಟಿರ್ದ ಹೃಚ್ಛಲ್ಯಮಂ" ಎಂದು ಮೊದಲಾಗಿ ಹಂಬಲಿಸುವನು. ಅವನಿಗೆ ವಿವೇಕ ಹೇಳಿ ಮೋಹವನ್ನು ಮುರಿಯುವ ಬದಲು ಈ ಕುಮಿತ್ರನು "ಪರಿವ ಮನಕ್ಕೆ ಪಗ್ಗಮಿಲ್ಲಂ ; ನೋಡುವ ಕಣ್ಗಳ್ಗೆಡೆಗಟ್ಟಿಲ್ಲಂ" ಎಂದು ಉತ್ತೇಜನದ ಮಾತನ್ನಾಡುವನು. ಇಷ್ಟಕ್ಕಾದರೂ ನಿಲ್ಲಿಸಿದ್ದರೆ ಚೆನ್ನಾಗುತ್ತಿದ್ದಿತು. ಆದರೆ ಸುನಂದೆಗೂ ಚಂಡಶಾಸನದಲ್ಲಿ ಅನುರಾಗವಿಲ್ಲದಿಲ್ಲವೆಂದೂ ಅವನ ಗಂಡಗಾಡಿಗೆ ಸೋಲದ ರಮಣಿ ಯಾರೆಂದೂ ಕೆಲವು ಹುಸಿಯ ದೃಷ್ಟಾಂತಗಳಿಂದ ನಂಬಿಸಿ, ಅವನ "ಮನಧ ಪಿಶಾಚಕ್ಕೆ ವಚನರಚನಾಧೂಪಮುಂ ತೋಱಿ, ವಿರಹವಿಕಾರಮಂ" ಕೆರಳಿಸುವನು. ಚಂಡಶಾಸನನ ನಚ್ಚಿನ ಗೆಳೆಯನಾಗಬೇಕೆಂದು ಸ್ವಾರ್ಥತತ್ಪರನಾದ ಸುದರ್ಶನನು ಹೀಗೆ ಮಾಡಿದಂತೆ ತೋರುತ್ತದೆ. ಅಂತೂ ಅವನ ಒತ್ತಾಸೆಯಿಂದ, ಸುನಂದೆಗೂ ತನ್ನಲ್ಲಿ ಅನುರಾಗವುಂಟು ; ಆಕೆ ಆದನ್ನು ಗಂಡನೆದುರಿಗೆ ಪ್ರಕಟಿಸಲು ಹಿಂಜರಿಯುತ್ತಿರಬಹುದು—ಎಂದು ಅಳಿನೆಚ್ಚಿಕೆ ಚಂಡಶಾಸನನಿಗೆ ಹುಟ್ಟಿ ಅವನ ವಿರಹವ್ಯಥೆ ಉಲ್ಬಣವಾಗುವುದು.

ಈ ನಡುವೆ, ಒಂದು ದಿನ ವಸುಷೇಣನೂ ಚಂಡಶಾಸನನೂ ಬೇಟೆಯ ವಿನೋದಕ್ಕಾಗಿ ಅರಣ್ಯಕ್ಕೆ ಹೋಗುವರು. ಅಲ್ಲಿ ವನವಿಹಾರ ಮಾಡಬೇಕೆಂದು ವಸುಷೇಣನು ಬಯಸಿ, ಭೋಜಸಾಮಗ್ರಿಯೊಡನೆ ನಂದನವನಕ್ಕೆ ಬರಬೇಕೆಂದು ಸುನಂದೆಗೆ ಹೇಳಿಕಳಿಸುವನು. ಚಂಡಶಾಸನನು ಕಾಯುತ್ತಿದ್ದ ಅವಕಾಶ ಇಂದು ದೊರೆಯಿತು. ಬೇಟೆಯ ರಭಸದಲ್ಲಿ ಅವನು ವಸುಷೇಣನಿಂದ ಬೇರೆಯಾಗಿ, ಆತನ ರಾಣಿ ಬರುವ ದಾರಿಯಲ್ಲೇ ಕಾದಿರುವನು. ಸುನಂದೆ ಮಿತಪರಿವಾರದೊಡನೆ ಪಲ್ಲಕ್ಕಿಯಲ್ಲಿ ಬರುವುದನ್ನು ಕಂಡು ಚಂಡಶಾಸನನ ಔತ್ಕಂಠ್ಯ ಹೊಮ್ಮಿ ಹರಿಯುವುದು. ಥಟ್ಟನೆ ಮುಂದುವರಿದು, ತಡೆದ ಅಂಗರಕ್ಷಕರನ್ನು ಕಡಿದು, ಸುನಂದೆಯನ್ನು ಸೆಳೆದು ತನ್ನ ರಥದಲ್ಲಿರಿಸಿಕೊಂಡು ಮನೋವೇಗದಿಂದ ಹೊರಟು ಹೋಗುವನು.

ಸುನಂದೆಯ ಸ್ಥಿತಿಯನ್ನು ಕೇಳಬೇಕೆ ? ಪತಿಯೊಡನೆ ವನವಿಹಾರಮಾಡುವ ಸುಖವನ್ನು ನಿರೀಕ್ಷಿಸಿಕೊಂಡು ಅವಳು ಉಲ್ಲಾಸದಿಂದ ಬರುತ್ತಿದ್ದರೆ, ಏನಾಯಿ

ತೆಂದು ಅರಿಯುವ ಮೊದಲೇ ಈ ಕಾಮುಕಾತರನ, ವಿಶ್ವಾಸಘಾತುಕನ ಬಂದಿಯಾದಳು. ಚಂಡಶಾಸನನಲ್ಲಿ ಸುನಂದೆಗೆ ಎಳ್ಳಷ್ಟೂ ಅನುರಾಗವಿಲ್ಲ. "ಅವಳಿಂದೆ ಪತಿವ್ರತೆಯಿಲ್ಲ ನೋಡ ಲೋಕದೊಳ್." ರಾವಣನು ಕದ್ದೊಯ್ದ ಸೀತೆಯ ಅವಸ್ಥೆ ಅವಳಿಗೊದಗಿತು.[2] "ಉರಗಂ ಪಿಡಿದಂತೆ ಬೆದಱಿ" ಮೂರ್ಛೆಹೋದಳು. ಬಳಿಕ ಎಚ್ಚತ್ತು ತನ್ನ ದುರವಸ್ಥೆಯನ್ನರಿತು ಬಾಯಿಬಿಟ್ಟು ಹಲುಬಿದಳು ; ಕೂಗಿದಳು ; ನಾಡ ಜನಕ್ಕೂ ಧರೆ ಗಿರಿ ದಿಗ್ದೇವಿಯರಿಗೂ ವ್ಯರ್ಥವಾಗಿ ಮೊರೆಯಿಟ್ಟಳು. ಕಡೆಗೆ ಆ ದ್ರೋಹಿಯ ಕಡೆಗೆ ತಿರುಗಿ ಎದೆ ಚುಚ್ಚುವ ಮಾತುಗಳಿಂದ ಅವನನ್ನು ಮೂದಲಿಸಿದಳು. ಆದರೆ ಚಂಡಶಾಸನನು ಅವಕ್ಕೆ ಕಿವಿಗೊಡಲಿಲ್ಲ. ಏಕೆ ಕಿವಿಗೊಡಲಿಲ್ಲವೊ ? ಈಕೆ ತನ್ನನ್ನು ಒಲಿದವಳೇ ಅಲ್ಲವೆಂದು ಈಗ ಸ್ಫುಟವಾದರೂ ಅವನಿಗೆ ಏಕೆ ವಿವೇಕ ಬರಲಿಲ್ಲವೋ ? ಹೋಗಲಿ. ಅವನು ಕಾಮಕ್ಕೆ ಸೋಲುವುದೇ ಕೊನೆಗೆ ಸಿದ್ಧವೆಂದರೂ, ಈ ಘಳಿಗೆಯಲ್ಲಿ ಅವನ ಹೃದಯದೊಳಗೆ ಮಿತ್ರಧರ್ಮಕ್ಕೂ ಮೋಹಾವೇಶಕ್ಕೂ ಒಂದು ಕ್ಷಣಕಾಲ ಹೋರಾಟವಾದರೂ ನಡೆಯಲಿಲ್ಲವೆ ? ಕಥೆಯ ಭರದಲ್ಲಿ ಜನ್ನನು ಅದರ ನಿರೂಪಣೆಯನ್ನು ಮರೆತಿರಬಹುದೆ ?—ಅಂತೂ ಹೀಗೆ ಚಂಡಶಾಸನನು ಸುನಂದೆಯನ್ನು ಸಾಗಿಸಿಕೊಂಡು ಹೋಗುತ್ತಿರುವಾಗ ವಸುಷೇಣನ ಗಡಿನಾಡ ಸಾಮಂತನಾದ ಸಿಂಹಚೂಡನೆಂಬ ಕಡುಗಲಿ ಈ ಹೆಣ್ಣ ಮೊರೆಯನ್ನು ಕೇಳಿ ಚಂಡಶಾಸನನನ್ನು ಅಡ್ಡಗಟ್ಟುವನು. ಮಲ್ಲಯುದ್ಧದಲ್ಲಿ ಅವನ ಶಿರಸ್ಸನ್ನು ಚಂಡಶಾಸನನು ಛೇದಿಸಿ, "ಗಾಳಿಗೆ ಗಱಿ ಮೂಡಿದಂತೆ, ಮನಕ್ಕೆ ಮಡವೊಗೆದಂತೆ" ಪಯಣಿಸಿ, ಸುನಂದೆಯೊಡನೆ ತನ್ನ ದುರ್ಗವನ್ನು ಸೇರಿಕೊಳ್ಳುವನು.

ಇತ್ತ ವಸುಷೇಣನು ಬೇಟೆಯನ್ನು ಮುಗಿಸಿಕೊಂಡು ನಂದನವನಕ್ಕೆ ಹಿಂದಿರುಗಿ, "ಬಂದಳೆ ದೇವಿ ? ಪಂಕ್ತಿಗೆಡೆಮಾಡಿಸಿದಪ್ಪಳೆ ? ಚಂಡಶಾಸನಂ ಬಂದನೆ ?" ಎಂದು ಗೃಹಮಹತ್ತರರನ್ನು ಬೆಸಗೊಳ್ಳುತ್ತಿರುವಾಗ, ಅಲ್ಲಿಗೆ ಆಕ್ರಂದಿಸುತ್ತಾ ಬಂದ ಸುನಂದೆಯ ಸಖಿಯರಲ್ಲಿ ಒಬ್ಬಳ ಬಾಯಿಂದ ನಡೆದ ಅನಾಹುತವನ್ನು

[2] ಇನ್ನು ಮುಂಬೆ, ಈ ಕಥೆಗೂ 'ರಾಮಾಯಣ'ದ ಕಥೆಗೂ ಹಲವು ಸಾದೃಶ್ಯಗಳು ತೋರಿಬರುತ್ತವೆ. ರಾಮಾಯಣದಿಂದಲೇ ಈ ಭಾವಗಳನ್ನು ಗ್ರಹಿಸಿ ಜನ್ನನು ತನ್ನ ಕಥೆಯನ್ನು ಬೆಳಸಿರಬಹುದು. ವಿಸ್ತರಭಯದಿಂದ ಈ ಅಂಶವನ್ನು ಕುರಿತು ಇಲ್ಲಿ ಪ್ರಸಂಗಿಸಿಲ್ಲ.

ಕೇಳುವನು. ಹೆಣ್ಣಿನ ದೆಸೆಯಿಂದ ಏನೇನು ಅನರ್ಥಗಳಾಗುವುದಿಲ್ಲ! ಸುನಂದೆಗೆ ಆಸೆಪಟ್ಟು ಚಂಡಶಾಸನನು ಮಿತ್ರದ್ರೋಹಿಯಾದನು. ಆ ವಾರ್ತೆ ಕಿವಿಗೆ ಬೀಳುತ್ತಲೆ, ವಸುಷೇಣನಿಗೆ ಅವನಲ್ಲಿದ್ದ ಗಾಢಸ್ನೇಹವು ಮಾಯವಾಗಿ, ಪ್ರಾಣಮಿತ್ರನು ಪರಮಶತ್ರುವಾದನು. ರೋಷವ್ಯಥೆಗಳಿಂದ ಕೆರಳಿದ ವಸುಷೇಣನಿಗೆ ಶತ್ರುವನ್ನು ಘಾತಿಸಿ ಪ್ರಿಯತಮೆಯನ್ನು ಬಿಡಿಸಿತಂದ ಹೊರತು ಊಟವೂ ಬೇಡ. ಮಂತ್ರಾಲೋಚನೆಯನ್ನು ಕೂಡ ಧಿಕ್ಕರಿಸಿ "ಮುಂದನಾರಯ್ಯದೆ, ಪಿಂದಂ ಪಾರದೆ" ಆ ವನದಿಂದ ಹಾಗೆಯೇ ದಂಡೆತ್ತಿ ಹೊರಟು ಶತ್ರುವಿನ ದುರ್ಗವನ್ನು ಮುತ್ತುವನು. ಎಲ್ಲ ಕಾರ್ಯಗಳೂ ಇಲ್ಲಿ ಮಿಂಚಿನ ವೇಗದಿಂದ ನಡೆಯುವುವು. ದುರ್ಗದ ಪ್ರಜೆಗಳು "ಘರವೆಣ್ಣಂ ತಂದನೋ ತಂದನೊ ಪೆಸರ್ಗಿಡೆ ಪೆರ್ವಾರಿಯುಂ" ಎಂದು ಕೂಗಿಕೊಳ್ಳುತ್ತಿರುವಾಗ, ಎರಡು ಪಡೆಗಳಿಗೂ ದಿನವೆಲ್ಲಾ ಘೋರ ಯುದ್ಧ ನಡೆಯುವುದು.

ಅಂದಿನ ಸಂಜೆಯಲ್ಲಿ ಅಪಹಾರತೂರ್ಯಗಳು ಮೊಳಗಿ ಯುದ್ಧ ತಡೆದ ಮೇಲೆ, ಚಂಡಶಾಸನನು ಠೀವಿಯಿಂದ ಅಲಂಕಾರಮಾಡಿಕೊಂಡು ಸುನಂದೆಯನ್ನು ಸೆರೆಯಿಟ್ಟಿದ್ದ ಮಣಿಭವನಕ್ಕೆ ಮಹಾವೈಭವದೊಡನೆ ಬರುವನು. ಅವನು ಆಕೆಯನ್ನು ಅಪಹರಿಸಿ ತಂದು ಒಂದು ದಿನ ಮಾತ್ರ ಕಳೆದಿದೆ. ಪ್ರಯಾಣಕಾಲದಲ್ಲಿ ಸಿಂಹಚೂಡನ ಕೋಟಲೆಯೊದಗಿತು. ಊರಿಗೆ ತಲಪುತ್ತಿದ್ದ ಹಾಗೆಯೇ ವಸುಷೇಣನು ಬೆನ್ನಂಟಿ ಬಂದನು. ಈ ದಿನವೆಲ್ಲಾ ಯುದ್ಧದ ತೊಡಕು. ಹೀಗಾಗಿ, ಚಂಡಶಾಸನನು ಸುನಂದೆಯೊಡನೆ ಸಲಿಗೆಯಿಂದ ನಾಲ್ಕು ಮಾತನ್ನಾಡಿ, ಅವಳ ಖೇದವನ್ನು ಪರಿಹರಿಸಿ ಒಲಿಸಿಕೊಳ್ಳುವುದಕ್ಕೆ ಅವಕಾಶ ದೊರೆತಿಲ್ಲ. ಈಗ ರಾತ್ರಿ ಬಂದು ಸ್ವಲ್ಪ ಬಿಡುವು ದೊರೆತದ್ದರಿಂದ, ಸುನಂದೆಯ ಬಳಿಗೆ ಬಂದು "ಕಾಮಿ ಕಣ್ಣಜೀವನಲ್ತು; ಆಂ ಗಂಡುದೊಲ್ತು" ಎಂದು ಮೊದಲಾಗಿ ಅನುನಯದ ಮಾತನ್ನಾಡುವನು; ತನ್ನ ವೈಭವದ ಆಸೆ ತೋರಿಸಿ ಅವಳ ಮನಸ್ಸನ್ನು ಸೆಳೆದುಕೊಳ್ಳಲು ಪ್ರಯತ್ನಿಸುವನು. ಆದರೆ ಸುನಂದೆ ಅವನ ಪ್ರಣಯೌತ್ಸುಕ್ಯವನ್ನು ಕಂಡು ಕಿಡಿಕಿಡಿಯಾಗುವಳು; ಅವನ ಸಂಪತ್ತನ್ನು ತುಚ್ಛವಾಗೆಣಿಸುವಳು; "ವಸುಷೇಣನೃಪನೆ ಕೈವಿಡಿದಸುವಿಂಗೊಡೆಯಂ, ಚಿತಾಗ್ನಿಗೊಡೆಯಂ" ಎಂದು ತನ್ನ ದೃಢ ನಿಶ್ಚಯವನ್ನು ಸಾರುವಳು. ಆದರೆ ಆಕೆ ಎಷ್ಟು ಒಲ್ಲೆನೆಂದರೂ ಇವನ ಮೋಹ ಮುಗ್ಗದು. "ಬಿಡೆನಾಂ; ನೀಂ ಸಯೆ ಸಾವೆನಲ್ಲದುಟಿಯೆಂ ನೀನೊಲ್ದೊಡೇನೊಲ್ಲದಿರ್ದೊಡಮೇಂ? ಆನೆರಡಿಲ್ಲ

ದೊಲ್ದಿಂ” ಎಂದು ಅವಳಷ್ಟೇ ನಿರ್ಧರದಿಂದ ಹೇಳುವನು. ತನಗೆ ಒಲಿಯಲಿ, ಬಿಡಲಿ ; ಸೆರೆಗೆ ಒಳಪಟ್ಟಾದರೂ ಅವಳು ತನ್ನ ಮನೆಯಲ್ಲಿದ್ದರೆ ಸಾಕೆಂದು ಹೇಳಿ ಹೊರಟು ಹೋಗುವನು. ಅವನಿಗೆ ಸುನಂದೆಯಲ್ಲಿದ್ದ ಪ್ರಣಯದ ಅಚಲತೆಯೂ ಅನನ್ಯತೆಯೂ ನಮಗೆ ತಿಳಿಯುವುದಕ್ಕೆ ಇದೇ ಮೊದಲು. ಅದು ಸುನಂದೆಯ ನಿಶ್ಚಯವನ್ನು ಕದಲಿಸದಿದ್ದರೂ ನಮ್ಮ ಹೃದಯವನ್ನು ಕರಗಿಸುತ್ತದೆ.

ಆ ರಾತ್ರಿಯೆಲ್ಲಾ ಚಂಡಶಾಸನನು ವಿರಹದಿಂದ ಪರಿತಪಿಸಿ ಕೊನೆಯ ಉಪಾಯವೊಂದನ್ನು ಚಿಂತಿಸುವನು. ಗಂಡನು ಬದುಕಿರುವತನಕ ಸುನಂದೆಯ ಆಸೆ ಹಿಂಗಲಾರದು ; ಅವನು ಸತ್ತನೆಂದು ತಿಳಿದಮೇಲಾದರೂ ಅವಳ ಛಲ ಸಡಿಲ ಬಹುದಲ್ಲವೆ ?—ಹೀಗೆ ಯೋಚಿಸಿ ಬೆಳಗಾಗುತ್ತಲೆ, ತಾನು ಇರುಳಲ್ಲಿ ಶತ್ರುಸೈನ್ಯ ವನ್ನು ಮುತ್ತಿ ಧ್ವಂಸಮಾಡಿ ವಸುಷೇಣನನ್ನು ಕೊಂದಂತೆ ದುರ್ಗದಲ್ಲಿ ವಾರ್ತೆ ಹುಟ್ಟಿಸುವನು. ಒಬ್ಬ ಐಂದ್ರಜಾಲಿಕನು ಮಾಯೆಯಿಂದ ನಿರ್ಮಿಸಿದ ವಸುಷೇಣನ ಪಂದಲೆಯನ್ನು ತೆಗೆಯಿಸಿಕೊಂಡು ಸುನಂದೆಯಿದ್ದಲ್ಲಿಗೆ ಬಂದು, “ವಸುಷೇಣನೆ ಪತಿಯೆನಗೆಂದು ಸುನಂದೆ, ಸಿಡಿಲ್ವೆ ; ಮಾಟ್ಪ ಸೋವಡಿಕೆಯನೀ ಬಸಿವ ತಲೆಗೆ !” ಎಂದು ಅವಳ ಮುಂದೆ ಆ ಮಾಯದ ತಲೆಯನ್ನು ಹಾಕಿಸುವನು. ತನ್ನ ವಲ್ಲಭನದೇ ಆ ಶಿರಸ್ಸು ; ಅದೇ ಮಣಿಮುಕುಟ, ಅದೇ ಕೇಯೂರ, ಅದೇ ಹಾರ. ಹೀಗೆ ಬಲ್ಲ ಗುರುತುಗಳನ್ನು ಕಂಡು ತನ್ನ ಪತಿ ತೀರಿಹೋದನೆಂದೇ ಸುನಂದೆ ಭಾವಿಸುವಳು. ಥಟ್ಟನೆ ಒಂದು ಮಾತಿಲ್ಲದೆ, ಒಂದು ಕ್ಷಣ ತಡ ಮಾಡದೆ, ಆಕೆಯ ಪ್ರಾಣ ದೇಹವನ್ನು ಬಿಟ್ಟು ನಡೆಯುವುದು.[3]

ಚಂಡಶಾಸನನು ತನ್ನ ಮಾಯವನ್ನು ಹೂಡಿದಾಗ ಸುನಂದೆಯ ಮೇಲೆ ಈ ಪರಿಣಾಮವುಂಟಾಗಬಹುದೆಂದು ಕನಸಿನಲ್ಲಿಯೂ ಭಾವಿಸಿರಲಿಲ್ಲ. ತನಗೆ ಅವಳಲ್ಲಿ

---

[3] ರಾವಣನು ಸೀತೆಯೆದುರಿಗೆ ರಾಮನ ಮಾಯಾ ಶಿರಸ್ಸು ಧನುಸ್ಸುಗಳನ್ನು ತಂದುಹಾಕಿಸಿದ ಸನ್ನಿವೇಶವು (ಯುದ್ಧಕಾಂಡ, xxxi—xxxiv) ಇಲ್ಲಿ ಸಹಜವಾಗಿ ನೆನಪಿಗೆ ಬರುತ್ತದೆ. ಆದರೂ ಜನ್ನನು ಉದ್ದೇಶಪೂರ್ವಕವಾಗಿ ಒಂದು ವ್ಯತ್ಯಾಸವನ್ನು ಕಲ್ಪಿಸಿರುವಂತೆ ತೋರುತ್ತದೆ. ಸೀತೆ ಮಾಯಾ ಶಿರಸ್ಸನ್ನು ನೋಡಿ ಹಲುಬಿ ಮೂರ್ಛೆ ಹೋದರೂ ಮತ್ತೆ ಎಚ್ಚರಗೊಳ್ಳುವಳು. ತನ್ನನ್ನೂ ಕೊಂದುಬಿಡೆಂದು ರಾವಣನನ್ನು ಕೇಳಿಕೊಳ್ಳುವಳೇ ಹೊರತು ಪ್ರಾಣವನ್ನು ತೊರೆಯಲಾರಳು. ಸುನಂದೆಯ ಪ್ರಾಣ ಥಟ್ಟನೆ ಹೊರಟು ಹೋಯಿತೆಂದು ಹೇಳಿ, ಸೀತೆಗೂ ಅವಳು ಮಿಗಿಲೆಂದು ಸೂಚಿಸು ವುದು ಜನ್ನನ ಆಶಯವಾಗಿರಬಹುದು.

ಎಷ್ಟು ಗಾಢೋಜ್ಜ್ವಲಪ್ರಣಯವೋ ಅಷ್ಟೇ ಅವಳಿಗೆ ವಸುಷೇಣನಲ್ಲಿರಬಹುದೆಂದು ಅವನ ಮನಸ್ಸಿಗೇ ಬಂದಿರಲಿಲ್ಲ. ತಾನೊಂದು ಬಗೆದರೆ ದೈವವೊಂದು ಬಗೆಯಿತು. ಈ ಅತರ್ಕಿತವಾದ ಪರ್ಯವಸಾನವನ್ನು ಕಂಡು ಅವನ ಶೋಕದ ಹೆಬ್ಬಾಗಿಲು ತೆರೆಯಿತು. ಅವನಿಗೆ ಸುನಂದೆಯ ಮೇಲಿದ್ದ ಮೋಹವು ಕಳಂಕಿತವೆಂಬುದು ನಿಜ; ಆದರೆ ಅದು ನಿಷ್ಕಪಟವೆಂಬುದೂ ಅತ್ಯುತ್ಕಟವೆಂಬುದೂ ಅಷ್ಟೇ ನಿಜ. ಅವಳ ಮರಣದಿಂದ ಇವನು ಉರಿದು ಬೇಯುವನು; ಅವಳ ಶವದ ಮೇಲೆ ಬಂದು ಬಿದ್ದು ಅಪ್ಪಿಕೊಂಡು ಮೂರ್ಛೆಹೋಗುವನು; ಬಳಿಕ ಎಚ್ಚತ್ತು "ಬಾಯ್ಮುನಿದು ಮೋನದಿನೇಕೆಲೆ ದೇವಿ, ನೀಂ ಮುನಂ ನೋಡುವೆ? ಸಾವಿನಿಂ ಸರಸವಾಡುವರೇ?" ಎಂದು "ಬ್ಬಾಯಲುದು ಪಲಿಯಿಸಿ," ಜನ್ಮಾಂತರದಲ್ಲಾದರೂ ಅವಳ ನಿತ್ಯಸಂಗವು ದೊರೆಯಬೇಕೆಂದು ಘೋರ ವ್ರತವೊಂದನ್ನು ನಿಶ್ಚಯಿಸುವನು; ಹೊಗೆಯ ಮಂಟಪದಲ್ಲಿ ಉರಿಯ ಹಾಸಿಗೆಯ ಮೇಲೆ ತನಗೆ ಸುನಂದೆಯೊಡನೆ ಪ್ರಥಮ ಸಮಾಗಮ! "ನೀಂ ಸಯೆ ಸಾವೆನಲ್ಲದುಳಿಯೆಂ" ಎಂದು ಅವಳೆದುರಿಗೆ ಆಡಿದ್ದಂತೆಯೇ ಈಗ ಅವಳ ಮೃತದೇಹದೊಡನೆ ತಾನೂ ಚಿತೆಯೇರಿ ಪ್ರಾಣ ಬಿಡಬೇಕೆಂದು ಅವನ ಅಂತ್ಯ ಸಂಕಲ್ಪ—ಗಂಡನು ಸತ್ತಾಗ ಹೆಂಡತಿ ಸಹಗಮನ ಮಾಡಿದ ಪ್ರಸಂಗಗಳು ನಮಗೆ ಅಪರಿಚಿತವಲ್ಲ; ಹಿಂದಿನ ಕಾಲದಲ್ಲಿ ಅವು ಬಹು ಪ್ರಚುರವಾಗಿದ್ದುವು. ಆದರೆ ಪ್ರಿಯೆ ತೀರಿಹೋಗಲು—ಅವಳು ತನ್ನ ಪತ್ನಿಯಲ್ಲ, ತನ್ನನ್ನೊಲಿದವಳು ಕೂಡ ಅಲ್ಲ—ಗಂಡಸು ಸಹಗಮನ ಮಾಡುವುದು ನಮ್ಮ ಪ್ರಪಂಚಕ್ಕೇ ಹೊಸದು; ಸಾಹಿತ್ಯದಲ್ಲೆಲ್ಲಾ ಜನ್ನನ ಕಲ್ಪನೆಗೆ ಮಾತ್ರ ನಿಲುಕಿದ್ದು. ಆದರೆ ಇದು ಅಷ್ಟು ಅಸಂಭವವೆ? ಮೋಹವು ಸ್ತ್ರೀಪುರುಷಭೇದವನ್ನು ಲೆಕ್ಕಿಸುತ್ತದೆಯೆ? ಅದು ಉಲ್ಬಣವಾದಾಗ ಏನೇನು ವೈಚಿತ್ರ್ಯಗಳನ್ನು ನಡೆಯಿಸದು!

ಹೀಗೆ ಚಂಡಶಾಸನನು ಸುನಂದೆಯನ್ನು ಹಿಂಬಾಲಿಸುವ ನಿಶ್ಚಯ ಮಾಡಿದರೆ, ಇತ್ತ ಅವನ ರಾಣಿಯರು ಅವನನ್ನು ಹಿಂಬಾಲಿಸಲು ನಿಶ್ಚಯಿಸುವರು. ತಾವು ಅವನ ನೆರಳಂತೆ ಇರತಕ್ಕವರು; ತಮಗೇಕೆ ಅವನ ಪಾಪದ ಮಾತು—ಎಂದು ಈ ಪ್ರಮದೆಯರು ಸಹಗಮನಕ್ಕೆ ಅನುವಾಗುವರು. ಈ ರೀತಿ, "ಮಾವಿಂಗೆ ಮಲ್ಲಿಗೆಗಳ್ ಕೂರ್ತೊಡೆ ಮಾವು ಕೂರ್ತಪುದು ವಸಂತಶ್ರೀಗೆ."—ಆ ವಸಂತಶ್ರೀಯೋ ಮತ್ತೊಬ್ಬನಿಗೆ ಕೂರ್ತು ಪ್ರಾಣಬಿಟ್ಟವಳು!

ಸಹಗಮನದ ಸಂರಂಭದಲ್ಲಿ ದುರ್ಗವು ಹೀಗೆ "ಕರುಣಾದ್ಭುತ ರೌದ್ರ ರಸಾಕರ"

ವಾಗಿರಲು, ಅದಕ್ಕೆ ಲಗ್ಗೆ ಹತ್ತಬೇಕೆಂದು ಹೊರಟಿದ್ದ ವಸುಷೇಣನಿಗೆ ಈ ವಾರ್ತೆ ಮುಟ್ಟುವುದು. ಅದನ್ನು ಕೇಳಿ ಸ್ತಂಭಿತನಾಗಿ—ಇನಿಯಳು ಹೋದ ಬಳಿಕ ತಾನು "ಅಸು ಪೋದ ಬಾಟ್ವಿಣ"ನ ಹಾಗೆ ; ಇನ್ನು ಯಾವ ನಲ್ಲೆಗಾಗಿ ಕಾದಬೇಕು, ಯಾವ ಶತ್ರುವನ್ನು ಕೊಲ್ಲಬೇಕು ಎಂದು ಭಾವಿಸಿ, ಅವನು ನಿರ್ವೇಗದಿಂದ ತಪಸ್ಸಿಗೆ ನಡೆಯುವನು. ಇಲ್ಲಿ ಪ್ರಿಯೆಯ ಮರಣದಿಂದ ಚಂಡಶಾಸನ ವಸುಷೇಣರ ಮೇಲಾದ ಪರಿಣಾಮವು ಸಹಜವಾಗಿ ಭಿನ್ನವಾಗಿದೆ. ಚಂಡಶಾಸನನದು ಉತ್ಕಟ ವ್ಯಾಮೋಹ. ಬದುಕಿದ್ದಾಗ ಪ್ರಿಯೆಯ ಸುಖದ ಗಣನೆಯಿಲ್ಲ ; ಅವಳು ಸತ್ತಾಗ ತನ್ನ ದೇಹದ ಗಣನೆಯಿಲ್ಲ. ವಸುಷೇಣನ ಪ್ರೇಮವೂ ಅತಿಗಾಢವಾಗಿದ್ದರೂ ಅದರಲ್ಲಿ ಈ ರಾಜಸ ಅಂಶವಿಲ್ಲ. ಪ್ರಿಯಾವಿಯೋಗವು ಅವನನ್ನೂ ದಹಿಸಿದರೂ, ಬಾಳಿನಲ್ಲಿ ಬೇಸರ ಹುಟ್ಟಿಸಿದರೂ ಅವನ ನಿರ್ವೇಗವು ರೌದ್ರ ಮರಣದಲ್ಲಿ ಮುಗಿಯದೆ, ಉಜ್ಜ್ವಲ ತಪಸ್ಸಿನಲ್ಲಿ ಮುಗಿಯುವುದು. ಚಂಡಶಾಸನನ ಪ್ರಣಯ ಧಗ್ಗನುರಿದು ಸಿಕ್ಕಿದ್ದನ್ನೆಲ್ಲಾ ಭಸ್ಮಮಾಡುವ ಮಹಾ ಜ್ವಾಲೆಯಂತೆ ; ವಸುಷೇಣನದು ಸ್ತಿಮಿತವಾದ ಪ್ರದೀಪಪ್ರಭೆಯಂತೆ.

ಚಂಡಶಾಸನನು ಸಹಗಮನಕ್ಕೆ ಅನುವಾಗುತ್ತಿದ್ದ ಮಾತನ್ನು ಅಷ್ಟಕ್ಕೇ ಬಿಟ್ಟು, ಮುಂದೆಲ್ಲಾ ವಸುಷೇಣನ ಜನ್ಮಾಂತರಗಳ ಕಥೆಯನ್ನೇ ಜನ್ನನು ಬೆಳಸಿದ್ದಾನೆ. ಸಹಗಮನ ನಡೆಯಿತೆಂದು ಅವನು ಬಾಯಿಬಿಟ್ಟು ಹೇಳದಿದ್ದರೂ ಅದನ್ನು ನಾವೇ ಊಹಿಸಿಕೊಂಡು,—ಪುನರ್ಜನ್ಮದಲ್ಲಾದರೂ ಚಂಡಶಾಸನನ ಪ್ರಣಯ ಈಡೇರಿತೆ? ಸುನಂದೆಯ ಗತಿ ಹೇಗೆ? ವಸುಷೇಣನಿಗೂ ಅವಳಿಗೂ, ಚಂಡಶಾಸನನಿಗೂ ಅವಳಿಗೂ ಮುಂದೆ ಯಾವ ಸಂಬಂಧವೊದಗಿತು ?—ಇವೇ ಮೊದಲಾದ ಅಂಶಗಳನ್ನು ತಿಳಿಯಲು ತವಕಪಡುತ್ತಿರುತ್ತೇವೆ. ಆದರೆ ಇದೊಂದಕ್ಕೂ ಜನ್ನನು ಉತ್ತರಕೊಡುವುದಿಲ್ಲ. ಸ್ತ್ರೀನಿಮಿತ್ತವಾದ ಬದ್ಧವೈರವು ಬೇರೊಂದು ರೂಪದಲ್ಲಿ ಜನ್ಮಾಂತರಕ್ಕೂ ಬೆನ್ನಂಟಿ ಬಂದು, ಪುರುಷೋತ್ತಮ-ವಾಸುದೇವನಾಗಿ ಅವತರಿಸಿದ್ದ ವಸುಷೇಣನ ಕೈಯಿಂದ ಮಧುಕೈಟಭದಾನವನಾಗಿ ಹುಟ್ಟಿದ್ದ ಚಂಡಶಾಸನನನ್ನು ಸಂಹಾರಗೊಳಿಸಿತೆಂಬುದೊಂದೇ ಮುಂದಿನ ಕಥೆಯಲ್ಲಿ ಹೊರಪಡುವ ಪ್ರಕೃತಾಂಶ. ಇದೂ ಕೂಡ ಜನ್ನನ ನಿರೂಪಣೆಯಲ್ಲಿ ಪ್ರಧಾನವಾಗಿಲ್ಲ.

ಇಷ್ಟಾದರೂ, ಈ ಉಪಾಖ್ಯಾನದಲ್ಲಿ ಸುನಂದೆ ಚಂಡಶಾಸನರೇ ಮುಖ್ಯಪಾತ್ರ

ಗಳು.ಅವರ ಪ್ರಣಯ ಪ್ರಸಂಗವನ್ನು ವರ್ಣಿಸುವುದರಲ್ಲೇ, ಅವರ ಸ್ವಭಾವವನ್ನು ಚಿತ್ರಿಸುವುದರಲ್ಲೇ, ಜನ್ನನಿಗೆ ಹೆಚ್ಚು ಆಸಕ್ತಿ. ಪಾತಿವ್ರತ್ಯದ ಅಚಲಸ್ತಂಭವನ್ನು ಬಿಗಿಹಿಡಿದು ಅದರಡಿಯಲ್ಲಿ ಪ್ರಾಣವೊಪ್ಪಿಸುವ ಸುನಂದೆ; ಅಲಭ್ಯಳಾದ ಅವಳನ್ನು ಬಯಸಿ, ಮಿತ್ರ ದ್ರೋಹದಿಂದ ಮೊದಲು ಪಾತಕರ ಕ್ರೋಧಕ್ಕೆ ಈಡಾಗಿ, ಬಳಿಕ ತನ್ನ ಕಲುಷಿತ ಪ್ರಣಯದ ಸತ್ತ್ವದಿಂದಲೇ, ತನ್ನನ್ನು ಧಿಕ್ಕರಿಸಿದ ಪ್ರಿಯೆಯ ಚಿತೆಯನ್ನೇರುವ ಲೋಕವಿಲಕ್ಷಣ ವರ್ತನೆಯಿಂದಲೇ, ಪಾತಕರ ಅನುಕಂಪವನ್ನು ಗಳಿಸುವ ಚಂಡಶಾಸನ! ಇವರಿಬ್ಬರೂ ಕನ್ನಡ ಸಾಹಿತ್ಯದಲ್ಲಿ ಚಿರಂಜೀವಿಗಳು.

೪

ಯಶೋಧರಚರಿತೆಯಲ್ಲಿ ಅಮೃತಮತಿಯ ಕಥೆಯನ್ನು ನಿರೂಪಿಸಿ, ಸುಮಾರು ಇಪ್ಪತ್ತು ವರ್ಷಗಳು ಕಳೆದ ಮೇಲೆ, ಜನ್ನನು ಅನಂತನಾಥಪುರಾಣದಲ್ಲಿ ಚಂಡ ಶಾಸನನ ಕಥೆಯನ್ನು ರಚಿಸಿದನು. ಒಂದಕ್ಕೊಂದಕ್ಕೆ ಇಷ್ಟು ದೀರ್ಘವಾದ ಅಂತರ ವಿದ್ದರೂ,-ಹರೆಯದ ಹುರುಪಿನಲ್ಲಿ ಬರೆದ ಯಶೋಧರಚರಿತೆಯ ಉಜ್ಜ್ವಲತೆಯೂ ಸಾಂದ್ರತೆಯೂ ನಿರಂತರ ರಸಧಾರೆಯೂ ಇಳಿವಯಸ್ಸಿನಲ್ಲಿ ಬರೆದ ಅನಂತನಾಥ ಪುರಾಣದಲ್ಲಿ ಸ್ವಾಭಾವಿಕವಾಗಿಯೇ ಕುಂಠಿತವಾಗಿದ್ದರೂ—ಈ ಎರಡು ಪ್ರಣಯ ಕಥೆಗಳಿಗೂ ವಿಶೇಷ ಸಾಮ್ಯವುಂಟು. ಇಪ್ಪತ್ತು ವರ್ಷಗಳು ಹಿಂದು ಜನ್ನನ ಶಕ್ತಿ ಯನ್ನು ಕುಂದಿಸಿರಬಹುದೇ ಹೊರತು ಅವನ ದೃಷ್ಟಿಯನ್ನು ಹೊರಳಿಸಿಲ್ಲ. ಈ ಎರಡು ಕಥೆಗಳಲ್ಲೂ ವಸ್ತು ಒಂದೇ : ದುರ್ಭರವಾದ ದುರಂತವಾದ ಅಧಾರ್ಮಿಕ ಪ್ರಣಯ. ಇದರ ಬಗೆಯೂ ಗತಿಯೂ ಕೊನೆಯೂ ಎರಡರಲ್ಲೂ ಒಂದೇ ಪ್ರಕಾರ ವಾಗಿದೆ. ಅಮೃತಮತಿಗೆ ಅಷ್ಟವಂಕನಲ್ಲೂ ಚಂಡಶಾಸನನಿಗೆ ಸುನಂದೆಯಲ್ಲೂ ವ್ಯಾಮೋಹವು ಪಾತ್ರವಿವೇಚನೆಯಿಲ್ಲದೆ ಅತರ್ಕಿತವಾಗಿ ಉದಿಸಿತು; ಕ್ಷಿಪ್ರ ದಲ್ಲಿಯೇ ಹಬ್ಬಿ ಅವರ ವಿವೇಕವನ್ನು ಮುಸುಕಿತು ; ಪಾಪಪಂಕದಲ್ಲಿ ಕಾಲಿಡಿಸಿ ಆಳಕ್ಕೆ ತುಳಿಯಿತು ; ಸಾವಿನ ಗಡಿಗೂ ಅಲ್ಲಿಂದ ಆಚೆಗೂ ಅವರನ್ನು ಬೆನ್ನಂಟಿತು. ಎರಡು ಕಡೆಗಳಲ್ಲೂ ನಮಗೆ ಕಾಣಿಸುವುದು ಇದೇ ಘೋರಚಿತ್ರ.

ಈ ಅಧಾರ್ಮಿಕ ಪ್ರಣಯವು ಚಾಪಲ್ಯದಿಂದ ಹುಟ್ಟಿ ಔದಾಸೀನ್ಯದಲ್ಲಿ ಪರಿಣಮಿಸುವ ಕ್ಷಣಿಕ ಕಾಮವಲ್ಲ ; ಇದು ಗೃಹಸ್ಥ ಧರ್ಮಕ್ಕೇ ಕುಠಾರರೂಪವಾದ ಆಜೀವ ವ್ಯಾಮೋಹ. ಅಷ್ಟವಂಕನನ್ನು ಬಯಸಿ ಅಮೃತಮತಿ ತನ್ನ ಪಾತಿವ್ರತ್ಯ

ವನ್ನು ಸೂರೆಮಾಡುವಳು ; ಮೆಚ್ಚಿ ನಂಬಿದ ಪತಿಗೆ ದ್ರೋಹವನ್ನಾಚರಿಸಿ, ಕಡೆಗೆ ಆತನ ಪ್ರಾಣವನ್ನು ಕೂಡ ತೆಗೆಯುವಳು. ಸುನಂದೆಯನ್ನು ಕಾಮಿಸಿ ಚಂಡಶಾಸನನು ಅತಿಥಿಧರ್ಮವನ್ನೂ ಮಿತ್ರಧರ್ಮವನ್ನೂ ಉಲ್ಲಂಘಿಸುವನು ; ತನ್ನ ನಚ್ಚಿನ ಗೆಳೆಯನ ಸಂಸಾರವನ್ನು ಒಡೆಯುವನು ; ತಾನು ಒಲಿದವಳ ಮರಣಕ್ಕೇ ಕಡೆಗೆ ಕಾರಣವಾಗುವನು. ಹೀಗೆ ಒಂದೊಂದು ಪಾತ್ರದಲ್ಲೂ ವ್ಯಾಮೋಹವು ಮಹಾನರ್ಥಕ್ಕೆ ಬೀಜವಾಗುವುದು. ಅದರ ದೆಸೆಯಿಂದ ವ್ಯಕ್ತಿಯ ಶೀಲವೂ ಗುಣವೂ ಕೆಡುತ್ತಾ, ಹೆಜ್ಜೆಹೆಜ್ಜೆಗೂ ಅಧೋಗತಿಯಾಗುವುದು. ಅಮೃತಮತಿ ಮೊದಲು ಹೇಗಿದ್ದಳು ! ಈ ಮೋಹದ ದೆಸೆಯಿಂದ ಕಡೆಗೆ ಯಾವ ಅಕಾರ್ಯಕ್ಕೂ ಹೇಸದ ಕಲ್ಲೆದೆಯ ಪಾಪಿಯಾಗುವಳು. ಚಂಡಶಾಸನನು ಕೂಡ ಕಳವು, ಕೊಲೆ, ಮೋಸ ಇದೊಂದಕ್ಕೂ ಹಿಂಜರಿಯದೆ ಹೋಗುವನು. ಈಪ್ಸಿತಸಾಧನೆಯ ಒಂದೇ ಗುರಿಯನ್ನು ಹಿಡಿದ ಈ ವ್ಯಕ್ತಿಗಳಿಂದ ನಿಷ್ಕಳಂಕರಾದವರಿಗೂ ಬಾಧೆ ತಟ್ಟುವುದು. ಯಶೋಧರನಿಗೂ ಅವನ ತಾಯಿಗೂ ಒದಗಿದ ಕ್ಲೇಶವನ್ನೂ ಭವಪರಿಭ್ರಮಣವನ್ನೂ ನೋಡಿ. ಚಂಡಶಾಸನನಿಂದ ವಸುಷೇಣನಿಗೂ ಸುನಂದೆಗೂ ಒದಗಿದ ದುಃಖಪರಂಪರೆಯನ್ನು ನೋಡಿ.

ಆದರೆ ಇಷ್ಟು ಅನಾಹುತಕ್ಕೆಲ್ಲಾ ಈ ವ್ಯಕ್ತಿಗಳು ಮಾತ್ರವೇ ಕಾರಣವೆಂದೂ, ಅವರ ದುಷ್ಪ್ರವೃತ್ತಿಯೊಂದೇ ಹೊಣೆಯೆಂದೂ ಹೇಳಲಾಗುವುದಿಲ್ಲ. ವಿಧಿ ಮೊದಲು ಇಬ್ಬರಿಗೂ ಕಣ್ಣುಕಟ್ಟಿ ಮೋಹದ ಮಡುವಿನೊಳಕ್ಕೆ ನೂಕುತ್ತಾನೆ. ತಳಕ್ಕೆ ಸೆಳೆಯುತ್ತಿರುವ ಸುಳಿಯನ್ನು ಅಡ್ಡಗಟ್ಟಿ ದಡಕ್ಕೆ ಈಜಿಕೊಂಡು ಬನ್ನಿರೆನ್ನುತ್ತಾನೆ. ಇಂದ್ರಿಯ ದಮನದ ಬಗೆಯನ್ನರಿಯದೆ, ಆ ಪ್ರವೃತ್ತಿಗೇ ಅವಕಾಶ ದೊರೆಯದೆ, ಈ ವ್ಯಕ್ತಿಗಳು ಮುಳುಗಿಹೋಗುತ್ತಾರೆ. ಮಾವುತನ ಅತಿಮಧುರವಾದ ಗಾಯನದ ಮೂಲಕವೇ ವ್ಯಾಮೋಹ ವಿಷವು ಅಮೃತಮತಿಯ ಹೃದಯವನ್ನು ಸೇರಬೇಕೆ ! ಆ ಸಮಯದಲ್ಲಿ ಅವಳು ಮನಸ್ಸನ್ನು ಬಿಗಿಹಿಡಿಯಲಿಲ್ಲವೆಂದು ದಂಡಿಸುವ ಅಧಿಕಾರ ಯಾರಿಗುಂಟು ? ವಸುಷೇಣನ ಮನೆಯಲ್ಲಿ ಅತಿಸಲಿಗೆ ದೊರೆಯದಿದ್ದರೆ,ಸುದರ್ಶನಹತಕನ ಕುಮಂತ್ರವು ಉದ್ರೇಕಿಸದಿದ್ದರೆ ಚಂಡಶಾಸನನ ಅನುರಾಗವೂ ಹದಮೀರುತ್ತಿರಲಿಲ್ಲವೇನೋ ?

ಇಷ್ಟರ ಮೇಲೆ, ಈ ವ್ಯಕ್ತಿಗಳ ಪ್ರಣಯೋನ್ಮಾದದಲ್ಲಿಯೇ ಮಂದಚೇತನರ ಆಕ್ಷೇಪಣೆಗಳನ್ನು ನಿವಾರಿಸುವ ಒಂದು ಔಜ್ಜ್ವಲ್ಯವಿದೆ.ಅಮೃತಮತಿಗಾಗಲಿ ಚಂಡ

ಶಾಸನನಿಗಾಗಲಿ ಪ್ರೇಮವು ಒಂದು ವಿನೋದದ ರೂಪದಲ್ಲಿ, ಕ್ಷಣಿಕಲಾಲಸೆಯ ರೂಪದಲ್ಲಿ ಮೃದುಗತಿಯಿಂದ ಬರಲಿಲ್ಲ; ಮೃತ್ಯುವಿನ ಕಠಾರಿಯಂತೆ ಅವರ ಹೃದಯವನ್ನು ಇರಿದು ಹೊಕ್ಕಿತು. ಒಲವಿನ ಹುಚ್ಚು ಹಿಡಿದು ಅವರು ಪಟ್ಟ ಕೋಟಲೆಯನ್ನೂ ಬೆಂದ ಬೇಗೆಯನ್ನೂ ಅನುಭವಿಸಿ ಬಲ್ಲವರು ಮಾತ್ರ ಅವರಿಗೆ ಮನೋನಿಗ್ರಹವಿರಲಿಲ್ಲವೆಂದು ಆಕ್ಷೇಪಿಸಲಿ. ಇನ್ನೊಂದು ವಿಷಯ. ಈ ಪ್ರಣಯ ಇಷ್ಟು ಉಗ್ರವಾಗಿದ್ದುದರಿಂದಲೇ ಇಷ್ಟು ಸ್ಥಿರವೂ ಆಯಿತು. ಅವರ ಮಿಕ್ಕ ದುರ್ವ್ಯಾಪಾರಗಳನ್ನು ಖಂಡಿಸಿದರೂ ಈ ಸ್ಥೈರ್ಯವನ್ನು ನಾವು ಮೆಚ್ಚಬೇಕಲ್ಲವೆ? ಹುಳಿತು ನಾರುತ್ತಿದ್ದರೂ ಅಷ್ಟವಂಕನೇ ತನಗೆ ಕಾಮದೇವನೆಂದು ಕೊನೆತನಕ ಭಾವಿಸಿದ ಅಮೃತಮತಿಯ ಅಭಿರುಚಿಗೆ ನಾವು ಜಿಗುಪ್ಸೆಪಟ್ಟರೂ ಅವಳ ಸ್ಥಿರವಾದ ಅನನ್ಯವಾದ ಪ್ರಣಯಕ್ಕೆ ತಲೆದೂಗಬೇಕಲ್ಲವೆ ? ಚಂಡಶಾಸನನು, "ಆನೆರಡಿಲ್ಲದೊಲ್ದೆಂ ; ಅದಱಿಂ ಬೇಱಾರ ಬೇಟಕ್ಕೆ ಬಾಯ್ವಿಡಲಾಱೆಂ" ಎಂದು ಹೇಳುವುದಿರಲಿ ; ಅವನ ಲೋಕಾತೀತವಾದ ಸಹಗಮನವೊಂದೇ ಅವನ ಸರ್ವ ದ್ರೋಹಗಳಿಗೂ ಅರೆಮರೆಯ ಮುಸುಕಿಕ್ಕುತ್ತದೆ.

ಅಮೃತಮತಿ ಚಂಡಶಾಸನರ ಪ್ರಣಯಸರಣಿಗೆ ಈ ರೀತಿಯಾಗಿ ನಿಕಟ ಸಾಮ್ಯವಿದ್ದರೂ ಒಂದು ಕಥೆ ಮತ್ತೊಂದರ ಪಡಿಯಚ್ಚಲ್ಲ. ಯಶೋಧರನ ಚರಿತ್ರೆ ಸಂಪ್ರದಾಯಬದ್ಧವಾಗಿದ್ದುದರಿಂದ ಅದರಲ್ಲಿ ಹೆಚ್ಚು ವ್ಯತ್ಯಾಸಗಳನ್ನು ಮಾಡಲು ಜನ್ನನಿಗೆ ಅವಕಾಶವಿರಲಿಲ್ಲ. ಆದರೆ ಆಧಾರ ಗ್ರಂಥಗಳಲ್ಲಿ[4] ಹೆಸರನ್ನು ಮಾತ್ರ ಕಾಣಿಸಿದ್ದ ಚಂಡಶಾಸನನ ವಿಷಯದಲ್ಲಿ ಸ್ವಾತಂತ್ರ್ಯವಹಿಸಿ, ಮೂಲಸೂತ್ರವು

4 ಕನ್ನಡದಲ್ಲಿ ಮಿಕ್ಕ ಜೈನಪುರಾಣಗಳಿಗಿರುವಂತೆಯೇ ಅನಂತನಾಥ ಪುರಾಣಕ್ಕೂ ಸಂಸ್ಕೃತದ 'ಮಹಾಪುರಾಣ' ವೂ ಅದನ್ನು ಅನುಸರಿಸಿ ಬರೆದ ಕನ್ನಡ 'ಚಾವುಂಡ ರಾಯ ಪುರಾಣ'ವೂ, ಆಧಾರಗ್ರಂಥಗಳೆಂದು ತೋರುತ್ತದೆ. (ಅನಂತನಾಥನ ಚರಿತ್ರೆಯನ್ನು ಪ್ರತ್ಯೇಕವಾಗಿ ಯಾವ ಸಂಸ್ಕೃತ ಕವಿಯಾದರೂ ವಿಸ್ತರಿಸಿ ಬರೆದಿದ್ದಾನೇನೋ ತಿಳಿಯದು). ಇವುಗಳಲ್ಲಿ, ನಮಗೆ ಪ್ರಕೃತವಾದ ಪ್ರಣಯಕಥೆ ಬಹು ಸಂಕ್ಷಿಪ್ತವಾಗಿ ಬಂದಿದೆ; ಉದಾಹರಣೆಗೆ ಮಹಾಪುರಾಣದಲ್ಲಿ ಐದಾರು ಶ್ಲೋಕಗಳಲ್ಲಿ ಮುಗಿದು ಹೋಗಿದೆ. ಜನ್ನನು ಈ ಶುಷ್ಕ ಸೂಚನೆಗೆ ಜೀವ ತುಂಬಿ ವಿಸ್ತರಿಸಿ ಮಾರ್ಪಡಿಸಿ ರಸಮಯವಾದ ಕಥೆಯನ್ನು ಕಲ್ಪಿಸಿದ್ದಾನೆ. ಯಶೋಧರಚರಿತೆಗಾದರೆ ವಾದಿರಾಜಕವಿಯ ಸಂಸ್ಕೃತ 'ಯಶೋಧರ ಕಾವ್ಯ'ದ ಪೂರ್ಣಾಧಾರವಿದ್ದಿತು. ಅಲ್ಲಿಯ ನಿರೂಪಣೆಯನ್ನೇ ಜನ್ನನು ಅನುಸರಿಸಿ, ಅಲ್ಲಿಯ ಸೊಗಸುಗಳಲ್ಲಿ ಹಲವನ್ನು ಸ್ವೀಕರಿಸಿದ್ದಾನೆ.

ಸ್ಫುಟವಾಗುವಂತೆಯೂ ವೈವಿಧ್ಯಕ್ಕೆ ಭಂಗಬಾರದಂತೆಯೂ ಕಥೆಕಟ್ಟಿದನು. ಕಥಾ ವಿಷಯ ಒಂದೇ ಆದರೂ, ಯಶೋಧರಚರಿತೆಯಲ್ಲಿ ಅದು ಸ್ತ್ರೀಯ ವ್ಯಾಮೋಹ, ಅನಂತನಾಥಪುರಾಣದಲ್ಲಿ ಪುರುಷನ ವ್ಯಾಮೋಹ. ಇಲ್ಲಿ ವ್ಯಾಮೋಹದ ವಿಷ ವಾಹಿನಿ ಒಂದೇ ಹೊಳೆಯ ಎರಡು ಕವಲುಗಳಂತೆ ಎರಡು ಕಡೆಗಳಲ್ಲೂ ಎರಡು ರೂಪಾಗಿ ಹರಿಯುತ್ತದೆ.ಅದು ಹೆಣ್ಣುಗಂಡೆಂಬ ಭೇದವನ್ನರಿಯದ ಸರ್ವಗ್ರಾಸಿ. ಅದಕ್ಕೆ ರೂಪ ಗುಣ ಪಕ್ಷಪಾತವೂ ಇಲ್ಲ. ಚಂಡಶಾಸನನು ಮೋಹಿಸಿದ್ದು ಸುನಂದೆಯ ದಿವ್ಯ ಸೌಂದರ್ಯ ಪ್ರೌಢಿಮೆಗಳಾದರೆ, ಅಮೃತಮತಿಗೆ ಅಷ್ಟವಂಕನ ಘೋರರೂಪವೂ ಪಶುಸ್ವಭಾವವೂ ಪ್ರಿಯವಾಗುತ್ತವೆ; "ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್!" ಇಷ್ಟೇ ಅಲ್ಲ; ಈ ಪ್ರೇಮ ಉದಿಸುವಾಗ ಪ್ರಿಯವಸ್ತುವಿನ ಮನೋಭಾವವನ್ನು ಕೂಡ ಗಣಿಸುವುದಿಲ್ಲ. ಅಷ್ಟವಂಕನಿಗೆ ಅಮೃತಮತಿಯ ಮೇಲಿದ್ದುದು ಪ್ರೇಮವೋ, ಕೇವಲ ಕಾಮವೋ ತಿಳಿಯದು; ಆದರೂ ಅವನು ಪ್ರತಿಪ್ರೇಮವನ್ನು ಅವಳಿಗೆ ಸಲ್ಲಿಸುತ್ತಿದ್ದನೆಂದೇ ಭಾವಿಸೋಣ. ಸುನಂದೆಗೆ ಚಂಡ ಶಾಸನನಲ್ಲಿ ಅನುರಾಗದ ಸೆಲೆಯಾದರೂ ಇದ್ದಿತೆ? ಅದರ ಅಭಾವದಿಂದ ಚಂಡ ಶಾಸನನ ಪ್ರಣಯಾಗ್ನಿ ನಂದುವ ಬದಲು ಇನ್ನೂ ಪ್ರಜ್ವಲಿಸಿತಲ್ಲವೆ?

ಸೂಕ್ಷ್ಮಾಂಶಗಳಲ್ಲೂ ಸಾಮ್ಯವೈಷಮ್ಯಗಳನ್ನು ಜೊತೆಗೊಳಿಸಿ ಕಥೆಗಳನ್ನು ಜನ್ನನು ರಚಿಸಿರುವುದಕ್ಕೆ ಒಂದೆರಡು ಉದಾಹರಣೆಗಳನ್ನು ಕೊಡಬಹುದು. ಅಮೃತಮತಿಯು ಕೆಳದಿ ಅಷ್ಟವಂಕನ ಹುಚ್ಚನ್ನು ಅವಳಿಗೆ ಬಿಡಿಸಲು ಎಷ್ಟೋ ಪ್ರಯತ್ನಮಾಡುವಳು; ಸುದರ್ಶನನು ಇಲ್ಲದ ನೆಚ್ಚಿಕೆಯನ್ನು ಚಂಡಶಾಸನನಿಗೆ ಹುಟ್ಟಿಸಿ ಅವನ ಮೋಹವನ್ನು ಕೆರಳಿಸುವನು. ಎರಡು ಕಡೆಗಳಲ್ಲೂ ಪರಿಣಾಮ ವೇನೋ ಒಂದೇ. ಅಮೃತಮತಿಯದು ಪತಿದ್ರೋಹವಾದರ, ಚಂಡಶಾಸನನದು ಮಿತ್ರದ್ರೋಹ. ಅದರ ಫಲವಾಗಿ ಯಶೋಧರನಿಗೂ ವಸುಷೇಣನಿಗೂ ಒಂದೇ ಬಗೆಯ ನಿರ್ವೇಗವೊದಗಿ ಇಬ್ಬರೂ ತಪಸ್ಸಿನ ಕಡೆ ತಿರುಗುವರು; ಆದರೆ ಯಶೋಧರನ ಉದ್ದೇಶ ಮಾತ್ರ ಅಮೃತಮತಿಯ ಕೊಲೆಪಾತಕತನದಿಂದ ಸಾಗುವುದಿಲ್ಲ. ಹಾಗೆ ನೋಡಿದರೆ, ಅಮೃತಮತಿಯ ಪಾತಕವೇ ಚಂಡಶಾಸನನ ಪಾತಕಕ್ಕಿಂತ ಘೋರತರ. ಚಂಡಶಾಸನನ ಸಹಗಮನವು ಅವನ ದುಷ್ಕೃತ್ಯಗಳಿಗೆ ಒಂದು ಬಗೆಯ ಪ್ರಾಯಶ್ಚಿತ್ತವೆನ್ನಬಹುದು. ಆದ್ದರಿಂದಲೇ ಮೊದಮೊದಲು ಅವನಲ್ಲಿ ನಮಗಿದ್ದ ಕ್ರೋಧ ಮಾಸಿ, ಅನುಕಂಪ ಮೂಡುವುದು. ಅಮೃತಮತಿ

ಮಾತ್ರ ನಮ್ಮ ಮೊದಲಿನ ಸಹಾನುಭೂತಿಯನ್ನು ಪೂರ್ಣವಾಗಿ ಕಳೆದುಕೊಂಡು ಕೊನೆಗಾಲದಲ್ಲಿ ಕೇವಲ ಜುಗುಪ್ಸೆಗೆ ಗುರಿಯಾಗುವಳು—ಹೀಗೆ ಕಥಾಂಶಗಳನ್ನು ಕುಶಲತೆಯಿಂದ ಬೇರ್ಪಡಿಸಿಕೊಂಡಿರುವುದರಿಂದ ಜನ್ನನ ಕೃತಿಗಳೆರಡೂ ಒಂದೇ ಮೂಲತತ್ತ್ವವನ್ನವಲಂಬಿಸಿದರೂ ಪುನರುಕ್ತಿಯಿಂದ ಬೇಸರಪಡಿಸದೆ, ಒಂದೇ ವಸ್ತುವಿನ ಭಿನ್ನಮುಖಗಳಂತೆ ಕಾಣಿಸಿ ಒಂದಕ್ಕೊಂದು ಪೂರಕವಾಗುವುವು.

ಈ ಎರಡು ಕಾವ್ಯಗಳಲ್ಲೂ ಜನ್ನನ ಮನಸ್ಸು ಏಕರೀತಿಯ ದುರಂತ ಪಾತ್ರಗಳ ಕಡೆಗೆ ಏಕೆ ಒಲೆಯಿತು ? ಸಮಾಜವ್ಯವಸ್ಥೆಯ ತಳಹದಿಯನ್ನು ಭೇದಿಸುವ, ನೀತಿಧರ್ಮಗಳ ಕಟ್ಟನ್ನು ಹರಿದುಬಿಡುವ, ಈ ಕಲುಷಿತ ಪ್ರೇಮವನ್ನೇ ಏಕೆ ನಿರೂಪಿಸಿದನು ? ಆಲಂಕಾರಿಕರ ಮತದಂತೆ ಈ ವಿಧದ ಶೃಂಗಾರವು ರಸವಾಗುವುದಿಲ್ಲ, "ರಸಾಭಾಸ"ವಾಗುತ್ತದೆ[5] ಎಂದು ಅವನಿಗೆ ತಿಳಿದೇ ಇರಬೇಕಲ್ಲವೆ ? ಹಾಗಾದರೂ, "ಜಾರ ಚೋರ ವೀರರ ಕಥೆ"ಯನ್ನು ತಾನೇ ಉಪಹಾಸಮಾಡಿದ್ದನ್ನು ಮರೆತಾದರೂ, ಇದನ್ನೇ ಏಕೆ ಪ್ರತಿಪಾದಿಸಿದನು ? ಜನ್ನನು ಮನಸ್ಸು ಮಾಡಿದ್ದರೆ, ಸಾಮಾನ್ಯ ಕವಿಗಳು ಕಾಮಸೂತ್ರದಿಂದ ಕಲಿತು ನಿರೂಪಿಸುವ ಆಳವರಿಯದ ಜೀವವುಕ್ಕದ ರತಿಯನ್ನೊ, ನೀತಿಸಂಪನ್ನವಾದ "ಗೃಹಾಶ್ರಮ ವ್ರತ"ವನ್ನೊ ವರ್ಣಿಸಬಹುದಾಗಿತ್ತು. ಆದರೆ ಕವಿಸಮಯಬದ್ಧವಾದ ಲೆಕ್ಕಾಚಾರದ ವಿರಹವೇದನೆ ಸಮಾಗಮ ಸೌಖ್ಯಗಳ ಆ ಏಕನಾದವೆಲ್ಲಿ, ಅದಮ್ಯ ಮೋಹದ ಚಂಡಮಾರುತ ಭರ್ರನೆದ್ದು ಕಟ್ಟುತಡೆಗಳನ್ನುರುಳಿಸಿ, ಜೀವಿಗಳನ್ನು ತರಗೆಲೆಯಂತೆ ಸುಳಿಸುತ್ತಿಸಿ ಮೊರೆಯುತ್ತಿರುವ ಈ ಭೀಷಣನಾದವೆಲ್ಲಿ ! ಜೀವನವಿರುವುದು ಇಲ್ಲಿ ; ಜೀವನದ ರಹಸ್ಯವಿರುವುದು ಇಲ್ಲಿ, ಜೀವನದ ಸಮಸ್ಯೆಯಿರುವುದು ಇಲ್ಲಿ. ಮೋಹ ಹುಟ್ಟುವಾಗ ಕುಲಪದವಿಗಳನ್ನು ನೋಡುವುದಿಲ್ಲ ; ಪಾತ್ರಾಪಾತ್ರಗಳನ್ನು ಲೆಕ್ಕಿಸುವುದಿಲ್ಲ. ಒಂದು ದಿಕ್ಕಿಗೆ ಹರಿಯತೊಡಗಿದರೆ,

---

5 "ರಸಾಭಾಸ" ಎಂದರೆ ರಸಭಂಗವಲ್ಲ. ಅದು ರಸದಂತೆ ತೋರುವ, ಆದರೆ ಶಾಸ್ತ್ರೋಕ್ತವಾದ ರಸದಷ್ಟು ಪರಿಪೂರ್ಣವೆನಿಸದ, ಕಾವ್ಯಾನುಭವ. ಶೃಂಗಾರ, ವೀರ ಮೊದಲಾದ ಪ್ರತಿಯೊಂದು ರಸಕ್ಕೂ "ಆಭಾಸ"ಗಳುಂಟು. ಉದಾಹರಣೆಗೆ, ಗಂಡು ಹೆಣ್ಣುಗಳಲ್ಲಿ ಅನುರಾಗವು ಪರಸ್ಪರವಾಗಿ ಉದಿಸದೆ ಏಕಪಕ್ಷೀಯವಾಗಿ ಹೊಮ್ಮಿದರೆ, ಹೆಣ್ಣಿಗೆ ಹಲವರಲ್ಲಿ ಆಸಕ್ತಿ ಹುಟ್ಟಿದರೆ, ಶೃಂಗಾರಾಭಾಸವಾಗುತ್ತದೆ ; ಬೇರೆಯ ಬಗೆಗಳೂ ಉಂಟು.

ಅದಕ್ಕೆ ಲಜ್ಜೆಯ ಸೋಂಕಿಲ್ಲ, ನೀತಿಯ ಕಟ್ಟಿಲ್ಲ, ಪಾಪಪುಣ್ಯಗಳ ಹಂಗಿಲ್ಲ. ಇದು ಹೀಗಾಗುವುದು ಏಕೆ? ಇಲ್ಲಿ ವಿಧಿಯ ಕ್ರೌರ್ಯವೆಷ್ಟು, ಮಾನವನ ದೌರ್ಬಲ್ಯವೆಷ್ಟು? ಹೀಗೆ ತುಂಬಿದ ಸಂಸಾರಗಳು ಒಡೆದು ದಿವ್ಯಮೂರ್ತಿಗಳು ಮಣ್ಣಿನಲ್ಲಿ ಕೆಡೆದು ಪುಡಿಯಾಗುವುದಕ್ಕೆ ಯಾರು ಯಾರು ಎಷ್ಟೆಷ್ಟು ಹೊಣೆ? ಇದೇ ಸಮಸ್ಯೆ. ಕವಿಗೂ ಹರಿಯದು. ಆದರೆ ಜೀವನದಲ್ಲಿ ಇದರ ವ್ಯಾಪನೆಯನ್ನು ನೋಡಿಯೂ—ಒಂದು ವೇಳೆ ತನಗೂ ಅದರ ಕಡೆಸೆರಗಾದರೂ ಸೋಕಿಯೂ—ಅವನು ಹೇಗೆ ಕಣ್ಣು ಮುಚ್ಚಿ ಕುಳಿತಾನು; ರಹಸ್ಯವನ್ನು ಭೇದಿಸಲಾಗದಿದ್ದರೆ ಸಮಸ್ಯೆಯನ್ನಾದರೂ ಸಹೃದಯರ ಮನಸ್ಸಿಗೆ ಮುಟ್ಟಿಸದೆ ಹೇಗೆ ನಿಂತಾನು;

ಮನಸಿಜನ ಮಾಯೆ ವಿಧಿವಿಳ-
ಸನದ ನೆರಂಬಡೆಯೆ ಕೊಂದು ಕೂಗದೆ ನರರಂ

ಎಂಬ ಶೋಕವಿಸ್ಮಯದ ನುಡಿಯನ್ನು ಹೇಗೆ ಹೊರಗೆಡಹದಿದ್ದಾನು!

# ಕನ್ನಡ ಭಾರತದಲ್ಲಿ ಶೃಂಗಾರದ ಸನ್ನಿವೇಶಗಳು

"ವಿರಹಿಗಳ ಶೃಂಗಾರ"

ಕಾವ್ಯರಚನೆಯಲ್ಲಿ ಕಥಾವಸ್ತುವಿಗೆ ದೊರೆಯುವ ಪುರಸ್ಕಾರವು ಕವಿಯಿಂದ ಕವಿಗೆ ಬೇರ್ಪಡುತ್ತದೆ. ಕಥೆಯನ್ನು ನೆವ ಮಾತ್ರಕ್ಕೆ ಇಟ್ಟುಕೊಂಡು, ತಮಗೆ ಇಷ್ಟಬಂದ ವರ್ಣನೆಯನ್ನೋ ಸಂಗತಿಯನ್ನೋ ತುಂಬ ಲಂಬಿಸತಕ್ಕವರು ಹಲವ ರುಂಟು. ಚಿತ್ರ ಬರೆಯುವುದಕ್ಕೆ ಗೋಡೆ ಬೇಕಾಗುವಂತೆ ವರ್ಣನೆಗಳನ್ನು ಮಾಲೆಗಟ್ಟುವುದಕ್ಕೆ ಇವರಿಗೊಂದು ಕಥಾಸೂತ್ರ ಬೇಕು ; ಅಷ್ಟೆ. ವಸ್ತು ಕಿರಿದಾ ಗಿದ್ದಷ್ಟೂ ಮನಸ್ಸಿಗೆ ಬಂದದ್ದನ್ನು ಸೇರಿಸಿ ತಮ್ಮ ಕವಿತಾಜಾಲವನ್ನು ಹೆಣೆಯು ವುದಕ್ಕೆ ಇವರಿಗೆ ಅವಕಾಶ ಹೆಚ್ಚು. ಕೃತಿಯ ಸಮುದಾಯಶೋಭೆಯ ಕಡೆಗೆ ಇವರ ಗಮನ ಅಷ್ಟು ಹೋಗುವುದಿಲ್ಲ. ಶ್ರೇಷ್ಠ ಕವಿಗಳೆನಿಸಿಕೊಂಡವರು ಕೂಡ ಈ ಬಗೆಯ ಆಕ್ಷೇಪಣೆಗೆ ಒಳಗಾಗುತ್ತಾರೆ. ಆದರೆ ಗದುಗಿನ ನಾರಣಪ್ಪನನ್ನು ಕುರಿತು ಮೇಲಿನ ಮಾತನ್ನು ಆಡುವ ಹಾಗಿಲ್ಲ. ಅವನು ಆರಿಸಿಕೊಂಡದ್ದು ಮಹಾಭಾರತದ ಮಹಾಕಥೆ. ಇದರಲ್ಲಿ ಪ್ರತಿಪಾದಿಸಬೇಕಾದ ಸಂಗತಿಗಳೆಷ್ಟು, ಸಂಘಟನೆಗಳೆಷ್ಟು! ಎಂಥ ಕವಿಯ ಕೈಯಾದರೂ ಇಲ್ಲಿ ಕಟ್ಟಿಹೋಗುತ್ತದೆ. ಇದನ್ನು ವಿಸ್ತರಿಸುವ ಹವ್ಯಾಸಕ್ಕಿಂತಲೂ ಸಂಗ್ರಹಿಸುವ ಸಮಸ್ಯೆಯೇ ಕುಮಾರವ್ಯಾಸನಿಗೆ ಪ್ರಧಾನ ವಾಗಿರಬೇಕು. ಕನ್ನಡ ಭಾರತದಲ್ಲಿ ಅವನ ಅದ್ಭುತ ಕವಿತಾಶಕ್ತಿ ಪ್ರಕಟವಾಗಿ ಇದು ಕನ್ನಡ ಸಾಹಿತ್ಯದ ಒಂದು ನಾಯಕರತ್ನವಾಗಿದ್ದರೂ ಈ ಕವಿತಾ ಸೌಂದರ್ಯವೆಲ್ಲಾ ಕಥೆಗೆ ಅಂಗವಾಗಿ ಬಂದಿರುವುದೇ ಹೊರತು ಕವಿತೆಗಾಗಿ ಕಥೆಯನ್ನು ಅವನು ವಿಸ್ತರಿಸಿದವನಲ್ಲ. ಆದ್ದರಿಂದಲೇ ಇಲ್ಲಿಯ ವರ್ಣನೆ ಮೊದಲಾದವುಗಳಲ್ಲಿ—ಯುದ್ಧಪ್ರಸಂಗಗಳನ್ನು ಗಣಿಸದೆ ಬಿಟ್ಟರೆ—ಬಹುಶಃ ಯಾವುದೂ ಹದಮೀರುವುದಿಲ್ಲ. ಭಾರತಕಥೆಗೆ ಆವಶ್ಯಕವಾದ ಹಲವು ಉಪ ವೃತ್ತಾಂತಗಳಲ್ಲಿ ಬಹುಶಃ ಯಾವುದೂ ಉಚಿತ ವಿಸ್ತಾರದ ಎಲ್ಲೆಯನ್ನು ದಾಟುವುದಿಲ್ಲ.

ಶೃಂಗಾರವು ವಿಶ್ವಮೋಹಕವಾದ ರಸ. ಇದರ ನಿರೂಪಣೆಯಲ್ಲಿ ಕವಿಗಳಿಗೆ ಸಾಮಾನ್ಯವಾಗಿ ಅತ್ಯುತ್ಸಾಹವಿರುತ್ತದೆ. ಬೇರೆ ಕಡೆಗಳಲ್ಲಿ ಮನಸ್ಸನ್ನು ಎಷ್ಟು ಬಿಗಿ ಹಿಡಿದಿದ್ದರೂ ಇಲ್ಲಿ ಅವರು ಸ್ವಚ್ಛಂದವಾಗಿ ವರ್ಣಿಸುತ್ತಾರೆ; ಶೃಂಗಾರದ ಸನ್ನಿವೇಶಗಳನ್ನು ತರುವುದಕ್ಕೆ ಎಷ್ಟೋಸಲ ಕಥೆಯ ನೇರವಾದ ಮಾರ್ಗವನ್ನು ಬಿಟ್ಟು ಅತ್ತಿತ್ತ ಹೊರಳುತ್ತಾರೆ. ಕನ್ನಡ ಕವಿಗಳಿಗೆ ಕುಲಗುರುವಾದ ಪಂಪನಲ್ಲಿ ಕೂಡ ಈ ದೌರ್ಬಲ್ಯವನ್ನು ನಾವು ಕಾಣದೆ ಇಲ್ಲ. ತನ್ನ ಭಾರತದ ನಾಲ್ಕೈದನೆಯ ಆಶ್ವಾಸಗಳಲ್ಲಿ ಅವನು ಅರ್ಜುನ-ಸುಭದ್ರೆಯರ ವಿರಹಸಂತಾಪವನ್ನು ದೀರ್ಘಗೊಳಿಸಿರುವುದೂ ಅರ್ಜುನನನ್ನು ಸುಮ್ಮಸುಮ್ಮನೆ ಸೂಳೆಗೇರಿಯಲ್ಲಿ ತೊಳಲಿಸಿರುವುದೂ ಇದಕ್ಕೆ ನಿದರ್ಶನ. ಕುಮಾರವ್ಯಾಸಯೋಗಿಯ ಕಾವ್ಯ ಪದ್ಧತಿಯಲ್ಲಿ ಹಲವು ದೋಷಗಳಿರಬಹುದು. ಆದರೆ ಶೃಂಗಾರಪ್ರಿಯತೆಯಿಂದ ತನ್ನ ಕೃತಿಯನ್ನು ಹದಗೆಡಿಸಿದನೆಂದು ಮಾತ್ರ ಅವನನ್ನು ದೂರುವ ಹಾಗಿಲ್ಲ. ಮಿಕ್ಕ ಕವಿಗಳು ಕ್ಲೇಶಪಟ್ಟು ಸಾಧಿಸುವ ಹಲವು ವರ್ಣನೆಗಳಿಗೆ ಇಲ್ಲಿ ಸ್ಥಳವೇ ಸಿಕ್ಕಿಲ್ಲ. ಒಂದು ವೇಳೆ ಅಂಥ ವಿಷಯ ಬಂದರೂ ಅದೂ ಸಂದರ್ಭೋಚಿತವಾಗಿರುತ್ತದೆ; ಕಥಾವಿಸ್ತಾರಕ್ಕೆ ಸಹಾಯಕವಾಗಿರುತ್ತದೆ. ಇದಕ್ಕೆ ಉದಾಹರಣೆಯೊಂದನ್ನು ಕೊಡಬಹುದು. ಪಾಂಡವರು ಅರಣ್ಯವಾಸದಲ್ಲಿದ್ದಾಗ ಅವರ ಮುಂದೆ ತನ್ನ ಸಿರಿಯನ್ನು ಮೆರೆಯಬೇಕೆಂದು ಆಲೋಚಿಸಿ ಅವರಿದ್ದ ತಪೋವನಕ್ಕೆ ದುರ್ಯೋಧನನು ಘೋಷಯಾತ್ರೆಯ ನೆವದಿಂದ ಬರುತ್ತಾನೆ. ಅವನ ಜೊತೆಯಲ್ಲಿ ರಾಣಿಯವಾಸದವರು; "ಯುವತಿಮಯವೋ ಸೃಷ್ಟಿ" ಎನ್ನುವಂತೆ ತಂಡತಂಡದ ಗಣಿಕೆಯರು. ಇವರ ವಿಲಾಸಕೇಳಿಯನ್ನು ಕಣ್ಣಾರ ನೋಡಿ ಪಾಂಡವರಿಗೂ ದ್ರೌಪದಿಗೂ ತಮ್ಮ ಹಿಂದಿನ ವೈಭವ ನೆನಪಿಗೆ ಬರಲಿ, ಹೊಟ್ಟೆ ಉರಿಯಲಿ ಎಂದು ಕೌರವನ ಉದ್ದೇಶ. ಈ ಸೊಕ್ಕೇರಿದ ನಾರಿಯರು ತಪೋವನದಲ್ಲೆಲ್ಲಾ ಸುತ್ತಾಡಿ ಅಲ್ಲಿಯ ಮುನಿಗಳ ತಪಸ್ಸಿಗೆ ಭಂಗ ತರುತ್ತಾರೆ. ತಮ್ಮ ಲಲ್ಲೆ ಕುಣಿತಗಳಲ್ಲಿ, ಪುಷ್ಪಾವಚಯದಲ್ಲಿ, ಜಲಕ್ರೀಡೆಯಲ್ಲಿ, ಯಾರನ್ನೂ ಲೆಕ್ಕಿಸದೆ ಅಲ್ಲಿದ್ದ ಗಂಧರ್ವವನದ ಬಾಗಿಲನ್ನು ಒದೆದು ನೂಕಿ ಒಳಕ್ಕೆ ನುಗ್ಗುತ್ತಾರೆ. ಇದರ ಫಲವಾಗಿ ಗಂಧರ್ವರಾಜನಾದ ಚಿತ್ರರಥನಿಗೂ ದುರ್ಯೋಧನನಿಗೂ ಕಾಳಗ ಮಸಗಿ, ಗಂಧರ್ವರ ಹಿಂಗಟ್ಟುಮುರಿಗೆ ಸಿಕ್ಕಿದ ದುರ್ಯೋಧನನು ಕಡೆಗೆ ದ್ರೌಪದಿಯ ಕಾಲುಂಗುಟದ ಸೋಂಕನ್ನು ಪಡೆದು ಬಿಡುಗಡೆ ಹೊಂದಬೇಕಾಗುತ್ತದೆ. ಮಿಕ್ಕ

ಕಾವ್ಯಗಳಲ್ಲಿ ಬರುವ ವನವಿಹಾರಕ್ಕೂ ಇದಕ್ಕೂ ಎಷ್ಟು ಅಂತರ! ಇಲ್ಲಿಯ ವರ್ಣನೆ ಇನ್ನೂ ವಿಸ್ತಾರವಾಗಿ ಬಂದಿದ್ದರೂ ಉಚಿತವಾಗಿಯೇ ಇರುತ್ತಿತ್ತು. ಆದರೆ ಆರೋಗ್ಯವನ್ನು ಬಯಸುವವನು ಇನ್ನೂ ಎರಡು ತುತ್ತು ಬೇಕೆನ್ನು ವಾಗಲೇ ಊಟಬಿಟ್ಟು ಏಳುವಂತೆ ಕುಮಾರವ್ಯಾಸನು ಈ ಪ್ರಸಂಗವನ್ನು ಸಂಗ್ರಹವಾಗಿ ರಚಿಸಿ ನಮ್ಮ ಕುತೂಹಲವನ್ನು ಬೆಳಸಿದ್ದಾನೆ. ಅವನು ಕಥಾ ನಿರ್ವಹಣದಲ್ಲಿ ವ್ಯಗ್ರನಾಗಿ ಕೈಯಲ್ಲಿರುವ ಅವಕಾಶವನ್ನು ಕೂಡ ಒಂದೊಂದು ಸಲ ಸರಿಯಾಗಿ ಉಪಯೋಗಿಸಿಕೊಳ್ಳುವುದಿಲ್ಲ. ಮೇಲೆ ಸೂಚಿಸಿದಂತೆ ಪಂಪ ಭಾರತದಲ್ಲಿ ಲಂಬಿಸಿರುವ ಸುಭದ್ರಾಪರಿಣಯದ ವೃತ್ತಾಂತವು ಕುಮಾರವ್ಯಾಸ ಭಾರತದಲ್ಲಿ ಎಷ್ಟು ಸಂಗ್ರಹವಾಗಿ ಬಂದಿದೆ! "ಬಾಲಕಿಗೆ ಸಂನ್ಯಾಸಿದೇವರ ಮೇಲೆ ಮನವಾಯ್ತುವರಿಗೀಕೆಯ ಮೇಲೆ ನೆಲಸಿತು ಚಿತ್ತ." ಎರಡೇ ಪದ್ಯಗಳಲ್ಲಿ ಅವರಿಬ್ಬರ ಅನುರಾಗವು ಪರಮಾವಧಿಯನ್ನು ಮುಟ್ಟುತ್ತದೆ. ನಾವು ಕಣ್ಣು ಮುಚ್ಚಿ ತೆರೆಯುವುದರೊಳಗಾಗಿ ಅರ್ಜುನಯೋಗಿ ಸುಭದ್ರೆಯನ್ನು ವರಿಸಿ ಅಪಹರಿಸಿಕೊಂಡು ಹೋಗುತ್ತಾನೆ. ಈ ವೃತ್ತಾಂತ ತನ್ನ ಮುಖ್ಯ ಕಥೆಗೆ ಆವಶ್ಯಕವಲ್ಲ ವೆಂದೋ ಏನೋ ನಾರಣಪ್ಪನು ಈ ಭಾಗವನ್ನು ನೀರಸಗೊಳಿಸುವುದಕ್ಕೂ ಹೆದರದೆ ಸಂಕ್ಷೇಪಿಸಿದ್ದಾನೆ. ಕಾವ್ಯ ಪ್ರಪಂಚದಲ್ಲಿ ಇಂಥ ಕಠೋರ ಸಂಯಮವು ಅಪೂರ್ವ.

ಸುಭದ್ರೆಗಿಂತಲೂ ಮೊದಲೇ ಪರಿಣೀತಳಾದ ದ್ರೌಪದಿಯ ವಿಷಯದಲ್ಲಾದರೆ ನಾರಣಪ್ಪನು ಈ ರೀತಿ ವರ್ತಿಸಲಿಲ್ಲ; ಅವಳ ಸ್ವಯಂವರ ವೃತ್ತಾಂತವನ್ನು ಸಪರಿಕರವಾಗಿ ವರ್ಣಿಸಿದ್ದಾನೆ. ದ್ರೌಪದಿ ಸುಭದ್ರೆಯರಿಗೆ ಈ ರೀತಿ ತಾರತಮ್ಯ ವನ್ನು ಕಲ್ಪಿಸಿದ ಕವಿಯ ಔಚಿತ್ಯಜ್ಞಾನವನ್ನು ನೋಡಿ.[1] ಮಹಾಭಾರತಕ್ಕೆ ನಾಯಕನು ಯಾರೆಂಬ ವಿಚಾರದಲ್ಲಿ ಚರ್ಚೆ ಬೇಕಾದಷ್ಟು ನಡೆಯಬಹುದು; ದೃಷ್ಟಿಭೇದದಿಂದ ಉತ್ತರವೂ ಭಿನ್ನವಾಗಬಹುದು. ಆದರೆ ಅದರ ನಾಯಿಕೆ ದ್ರೌಪದಿಯೆಂಬ ವಿಚಾರದಲ್ಲಿ ಸಂಶಯಲೇಶವೂ ಹುಟ್ಟುವಂತಿಲ್ಲ. ದ್ರೌಪದಿ ಭಾರತದ ಕ್ರಿಯಾಶಕ್ತಿ. ಆದ್ದರಿಂದಲೇ ಕುಮಾರವ್ಯಾಸನು ಅವಳ ಸ್ವಯಂವರದ ಪ್ರಸಂಗವನ್ನು ಉದ್ದೇಶಪೂರ್ವಕವಾಗಿ ಬೆಳಸಿದನು; ಅವಳ ಸೌಂದರ್ಯವನ್ನು

[1] ದ್ರೌಪದೀಸ್ವಯಂವರಕ್ಕೆ ಮೊದಲೇ ಬರುವ ಭೀಮ-ಹಿಡಿಂಬಿಯರ ಪ್ರಣಯ ಕಥೆಯನ್ನು ನಾರಣಪ್ಪನು ವಿಸ್ತರಿಸಿಲ್ಲ.

ಮನದಣಿಯ ಬಣ್ಣಿಸಿದನು. ನಾವು ಅವಳನ್ನು ಸಕೌತುಕನಯನಗಳಿಂದ ನಿರ್ಭಯವಾಗಿ ನೋಡುವುದು ಇದೊಂದೇ ಕಡೆ. (ಸ್ವಯಂವರವಧುವನ್ನು ಯಾವ ಆಕ್ಷೇಪಣೆಯೂ ಇಲ್ಲದೆ ದಿಟ್ಟಿಸಿ ನೋಡಬಹುದಲ್ಲವೆ.) ಭಾರತ ಕಥೆಯಲ್ಲಿ ಮುಂದೆ ಉದ್ದಕ್ಕೂ ಸುಡುವ ಕೆಂಡವಾಗುವ ದ್ರೌಪದಿ ಇಲ್ಲಿ ಮಾತ್ರ ಶೀತಳ ಮಾಣಿಕ ವಾಗಿದ್ದಾಳೆ:

ಪರಿಮಳದ ಪರಮಾಣುಗಳ ಸಂ
ವರಿಸಿ ಮುಕ್ತಾಫಲದ ಕೆಂದಾ
ವರೆಯ ಮಱಿದುಂಬಿಗಳ ವರ್ಣಾಂತರವನಳವಡಿಸಿ
ಸರಸ ವೀಣಾಧ್ವನಿಯ ಹಂಸೆಯ
ಗರುವಗತಿಗಳಸಾಯ್ದು ಮನ್ಮಥ
ವರವಿರಿಂಚಿಯೆ ಸೃಜಿಸಿದನು ಪಾಂಚಾಲನಂದನೆಯ.

ಇಲ್ಲಿ ವರ್ಣಿತಳಾಗಿರುವ "ಚೆಲುವಿಕೆಯ ಚೈತನ್ಯ"ವನ್ನು ಕವಿ ಮನ್ಮಥನೇ ಸೃಜಿಸಿದವನು. ಈ ದ್ರೌಪದಿ ತನ್ನ "ಹೊಸ ಹೊಗರ ಜವ್ವನ"ದ ಠೀವಿಯಿಂದ ಅಲ್ಲಿ ನೆರೆದಿದ್ದ ರಾಜಪುತ್ರರ ಸಮೂಹವನ್ನು ಬೆರಗುವಡಿಸುವಳು. (ಅವಳ ಸೌಂದರ್ಯದ ಮಾತು ಹಾಗಿರಲಿ; "ಕೆಲಕಡೆಯ ಕೆಳದಿಯರ ಕಂಗಳ ಹೊಳಹು ದುವ್ವಾಳಿಯಲಿ ಸುಮತಿ ಸ್ಖಲಿತ ಕೆಂದೂಳಿಯಲಿ ಮಾಸಿತು [ರಾಜಪುತ್ರರ] ಮನದ ಮಡಿವರ್ಗ!") ಮತ್ಸ್ಯಯಂತ್ರವನ್ನು ಭೇದಿಸಲು ಬಂದ ವಿಪ್ರವೇಷದ ಅರ್ಜುನನನ್ನು "ಇತ್ತ ನೋಡೌ ತಾಯೆ ಹಾರುವರತ್ತ ಗಡ್ಡದುಪಾಧ್ಯರನು" ಎಂದು ನಗುತ್ತಾ ಸಖಿಯರು ತೋರಿಸುವಾಗ ಈ ವಧು ನಾಚಿಕೆಯಿಂದ ತಲೆ ತಗ್ಗಿಸಿ ನೆಲವನ್ನು ಉಂಗುಟದಲ್ಲಿ ಔಕುವಳು; ಅವನು ವಿಜಯಶಾಲಿಯಾದ ಬಳಿಕ "ಮನ್ಮಥನ ಹೊಗರಿಟ್ಟ ಅಲಗಿ"ನಂತೆ ಪಲ್ಲಕ್ಕಿಯಲ್ಲಿ ಬಂದಿಳಿದು ಹರ್ಷ ಮಿಶ್ರವಾದ ಲಜ್ಜೆಯಿಂದ ಅವನ ಕೊರಳಿನಲ್ಲಿ ಸ್ವಯಂವರ ಮಾಲಿಕೆಯನ್ನು ಹಾಕುವಳು. ದ್ರೌಪದಿಯ ಮೂರ್ತಿ ಹೀಗೆ ಸೌಮ್ಯವಾಗಿ ನಮ್ಮ ಕಣ್ಣಿಗೆ ಬೀಳುವುದು ಇದೊಂದೇ ಕಡೆ. ಇಷ್ಟೇ ಅಲ್ಲ, ಈ ದ್ರೌಪದೀ ಸ್ವಯಂವರವನ್ನು ಬಿಟ್ಟರೆ ಲಲಿತ ಶೃಂಗಾರದ ಪ್ರಸಂಗವೇ ಕನ್ನಡ ಭಾರತದಲ್ಲಿಲ್ಲವೆಂದರೂ ತಡೆಯುತ್ತದೆ.

ಜ್ಞಾತಿಮಾತ್ಸರ್ಯದಿಂದ ಭೀಷಣವಾದ ಭಾರತಕಥೆಯಲ್ಲಿ ಪ್ರಣಯದ ಸನ್ನಿವೇಶಗಳಿಗೆ ಎಡೆ ಸಿಕ್ಕುವುದೇ ವಿರಳ. ಸಿಕ್ಕಿದರೆ, ಆಶ್ರಯಮಹಿಮೆಯಿಂದಲೋ

ಏನೋ ಅವಕ್ಕೆ ಒಂದು ರೌದ್ರಚ್ಛಾಯೆ ಮುಸುಕುತ್ತದೆ; ಪ್ರಣಯದ ಪರಿಣಾಮವು ವಿಷಮವಾಗುತ್ತದೆ. ಇಂಥ ಮೂರು ಪ್ರಸಂಗಗಳು ಕನ್ನಡ ಭಾರತದಲ್ಲಿ ಎದ್ದು ನಿಂತಿವೆ. ನಾರಣಪ್ಪನು ಅವುಗಳ ತಿರುಳನ್ನು ಚೆನ್ನಾಗಿ ಹಿಡಿದಿದ್ದಾನೆ; ರಸಪುಷ್ಟಿಯಲ್ಲಿ ವ್ಯಾಸ ಭಾರತದ ನಿರೂಪಣೆಯನ್ನು ಸಂಗಟ್ಟತಕ್ಕ—ಅಲ್ಲಲ್ಲಿ ಬಹುಶಃ ಮೀರಿಸತಕ್ಕ—ಸಾಮರ್ಥ್ಯದಿಂದ ಅವುಗಳನ್ನು ಚಿತ್ರಿಸಿದ್ದಾನೆ. ಈ ಸಂದರ್ಭಗಳಲ್ಲಿ ದ್ರೌಪದಿಗೆ ಸಂಬಂಧಪಟ್ಟ ಒಂದನ್ನೇ ಮೊದಲು ತೆಗೆದುಕೊಳ್ಳೋಣ. ಕೀಚಕವೃತ್ತಾಂತವು ಪಾಂಡವರ ಜೀವನದಲ್ಲಿ ಒಂದು ಮುಖ್ಯವಾದ ಸಂಗತಿ. ಅವರು ಕಾಡಿನಲ್ಲಿ ಹನ್ನೆರಡು ವರ್ಷ ತೊಳಲಿ ಬಳಲಿದ ಕೋಟಲೆಗಿಂತಲೂ ಒಂದು ವರ್ಷ ಕಾಲ ವೇಷ ಮರಸಿಕೊಂಡು ಸರೀಕರ ಮನೆಯಲ್ಲಿ ಸೇವಕರಾಗಿ, ಒದಗಿದ ಅಪಮಾನವನ್ನೆಲ್ಲಾ ನುಂಗಿಕೊಂಡು, ಪಟ್ಟ ಕಷ್ಟವೇ ಹೆಚ್ಚು ದುಸ್ಸಹವಾಗಿರಬೇಕು. ಪಾಂಡವರ ಈ ಅಜ್ಞಾತವಾಸದ ಮೂಗುಬ್ಬಸ ಬಿಚ್ಚಿ ಕಾಣುವುದು ಕೀಚಕ ವೃತ್ತಾಂತದಲ್ಲಿ. ಇದರ ಮೇಲೆ, ಇಲ್ಲಿ ಭೀಮನು ತೋರ್ಪಡಿಸಿದ ಅನನ್ಯ ಬಾಹುಬಲದ ಸುದ್ದಿ ಹರಡಿದ್ದರಿಂದ ತಾನೆ ದುರ್ಯೋಧನಾದಿಗಳಿಗೆ ಪಾಂಡವರ ನೆಲೆ ತಿಳಿದು ವಿರಾಟಪರ್ವದ ಮುಖ್ಯ ವಿಷಯವಾದ ಗೋಗ್ರಹಣವು ಒದಗಿದ್ದು. ನಾರಣಪ್ಪನು ಕೀಚಕ ವೃತ್ತಾಂತದ ಈ ಸ್ವಾರಸ್ಯವನ್ನೂ ಔಚಿತ್ಯವನ್ನೂ ಅರಿತು ತನ್ನ ಕೃತಿಯಲ್ಲಿ ಅದನ್ನು ವಿಸ್ತರದಿಂದ ವರ್ಣಿಸಿದ್ದಾನೆ.

ಅನಾಥೆಯೆನಿಸಿದ ಸುಂದರಿಯೊಬ್ಬಳು ಅರಮನೆಯಲ್ಲಿ ಗೌಡಿಯಾಗಿದ್ದರೆ ಅವಳು ಕಾಮುಕರ ಬೇಟೆಯ ಹಕ್ಕಿಯಾಗುವುದು ತುಂಬ ಸಹಜ. ತಾನು ವಿರಾಟನ ರಾಣಿಯ ಸೇವೆಗೆ ನಿಲ್ಲುವಾಗ ಎಷ್ಟು ನಿಬಂಧನೆಗಳನ್ನು ಮಾಡಿಕೊಂಡಿದ್ದರೇನು, ತನ್ನ ಪತಿಗಳಾದ ಗಂಧರ್ವರೈವರ ಕಾವಲು ತನಗುಂಟೆಂಬ ವರ್ತಮಾನವನ್ನು ಹಬ್ಬಿಸಿದ್ದರೇನು, ದ್ರೌಪದಿಯ ಸೌಂದರ್ಯದಿಂದ ಅವಳಿಗೆ ಪೀಡೆ ತಟ್ಟದಿರುವುದಂತೂ ಶಕ್ಯವಲ್ಲ. ಸಾಮಾನ್ಯರು ಅವಳನ್ನು ಕೆಣಕಲು ಹಿಂಜರಿಯಬಹುದು. ಆದರೆ ತನ್ನ ಅಕ್ಕನ ಓಲಗದಲ್ಲಿ ಕೀಚಕನು ಇವಳನ್ನು ನೋಡಿದ ಬಳಿಕ—ಅಜ್ಞಾತವಾಸದ ಕ್ಲೇಶಪರಿಭವಗಳಿಗೆ ಸಿಕ್ಕಿ ದ್ರೌಪದಿಯ ರೂಪು ಇನ್ನೂ ಸಾಣೆಹಿಡಿದಂತಾಗಿ "ಪಾಂಡವರ ದುರುಪದಿಯ ರೂಪಿಂಗೈದುಮಡಿಯೀ ಸತಿಯ ವಿಭ್ರಮ" ಎಂದು ಅವನಿಗೆ ತೋರಿದ ಬಳಿಕ—ಅವನು ತನ್ನ ಮನೋವೃತ್ತಿ

ಯನ್ನು ತಡೆಯುವನೆ? ಕೀಚಕನು ರಾಜನ ಬಂಧು, ಅವನ ಬಲಭುಜ: ಕೀಚಕನೇ ಮತ್ಸ್ಯದೇಶಕ್ಕೆ ನಿಜವಾದ ದೊರೆಯಾಗಿದ್ದನೆಂದರೂ ತಡೆಯುತ್ತದೆ. ಯಾರ ಅಂಕೆಯೂ ಇಲ್ಲದವನು ಕಾಣದ ಗಂಧರ್ವರಿಗೆ ಬೆದರುವನೆ? ತನ್ನ ಸಾಮದಾನೋಕ್ತಿಗಳಿಗೆ ದ್ರೌಪದಿ ಒಡಂಬಡದಿರಲು, ಕೀಚಕನು ಅಕ್ಕನ ಮುಂದೆ ಗೋಳಾಡಿ ಅವಳ ಮನಸ್ಸನ್ನು ಕರಗಿಸಿ, ಮಧುವನ್ನು ತರುವ ನೆವದಿಂದ ದ್ರೌಪದಿಯನ್ನು ತನ್ನ ಮನೆಗೆ ಅವಳು ಕಳಿಸಿಕೊಡುವಂತೆ ಕುಟಿಲೋಪಾಯವನ್ನು ಹೂಡುವನು. ಕೀಚಕನ ದುರಭಿಪ್ರಾಯವನ್ನು ದ್ರೌಪದಿ ಅರಿತಿದ್ದರೂ ಸೇವಾಧರ್ಮಕ್ಕೆ ಕಟ್ಟುಬೀಳಬೇಕಾಗುವುದು. "ಕುರುಕುಲಾಗ್ರಣಿ ಸೆಳೆದ ವಸ್ತ್ರಾಕರ್ಷಣದ ಭಯ ಮತ್ತೆ ಬಂದಿದೆ" ಎಂದು ಅಂಜುತ್ತಂಜುತ್ತಲೇ ಕೀಚಕನ ಮನೆಗೆ ಹೋಗುವಳು. ಅಲ್ಲಿ ಇನ್ನೊಮ್ಮೆ ಕೀಚಕನ ಪ್ರಣಯಯಾಚನೆ, ಇನ್ನೊಮ್ಮೆ ದ್ರೌಪದಿಯ ಧಿಕ್ಕಾರ. ಇಂಥ ನಿಶ್ಚಿತ ತಿರಸ್ಕಾರವನ್ನು ಬಹುಶಃ ಹಿಂದೆಂದೂ ಕಾಣದ ಕೀಚಕನಿಗೆ ಬೇಗ ರೋಷ ಬರುವುದು. ಹಿಡಿದ ಕೈಯನ್ನು ಕೊಸರಿಕೊಂಡು ಓಡಿಹೋದ ದ್ರೌಪದಿಯನ್ನು ಬೆಂಬತ್ತಿ ವಿರಾಟನ ಆಸ್ಥಾನದಲ್ಲಿ ಎಲ್ಲರೆದುರಿಗೆ ಒದೆಯುವುದಕ್ಕೂ ಅವನು ಹೇಸುವುದಿಲ್ಲ. ಅಲ್ಲೇ ಯುಧಿಷ್ಠಿರನು ಕಂಕಭಟ್ಟನ ವೇಷದಲ್ಲಿ ದೊರೆಯೊಂದಿಗೆ ಪಗಡೆಯಾಡುತ್ತಾ ಕುಳಿತಿದ್ದಾನೆ; ಅಡಿಗೆಯ ಮಲ್ಲನಾದ ಭೀಮನೂ ನಿಂತಿದ್ದಾನೆ; ಮಿಕ್ಕ ಗಂಡಂದಿರೂ ಇದ್ದಾರೆ. ಆದರೇನು? ಕೀಚಕನಿಗೆ ಹೆದರಿ ರಾಜನಾಗಲಿ ಸಭೆಯವರಾಗಲಿ ತುಟಿಪಿಟಿಕ್ಕೆನ್ನುವುದಿಲ್ಲ. "ನಾಲುವರ ನಡುವಣ ಹಾವು ಸಾಯದು" ಎಂದು ಮರೆಯಾಗಿ ಮೂದಲಿಸುತ್ತಾ, "ಬಲವಿಹೀನರಿಗಾಪ್ತರಿಲ್ಲ" ಎಂದು ಹಲುಬುತ್ತಾ, ದ್ರೌಪದಿ ಕಂಕಭಟ್ಟನನ್ನೇ ಧರ್ಮವನ್ನು ಹೇಳೆಂದು ಕೇಳಿದರೂ ಅವನು ಇದು ಕಾರ್ಯಸಮಯವಲ್ಲವೆಂದು ಸುಮ್ಮನಿದ್ದುಬಿಡುವನು. ಎದುರಿಗಿದ್ದ ಮರವೊಂದನ್ನು ದುರದುರನೆ ನೋಡಿದ ಭೀಮನ ಇಂಗಿತವನ್ನರಿತು ಅವನನ್ನೂ ಸುಮ್ಮನಿರಿಸುವನು. ಮಿಕ್ಕ ತಮ್ಮಂದಿರ ಮಾತನ್ನು ಹೇಳಬೇಕಾಗಿಯೇ ಇಲ್ಲ.

ಮಾನವನ್ನು ಕಾಯುವ ಗಂಡಂದಿರೇ ಹೀಗೆ ಹೇಡಿತನದಿಂದ ಕೈಕಟ್ಟಿ ಕುಳಿತ ಮೇಲೆ ದ್ರೌಪದಿಯ ಗತಿಯೇನು? ಆ ದಿನವೇನೋ ಸೂರ್ಯನ ಭೃತ್ಯನು ಅದೃಶ್ಯವಾಗಿ ಬಂದು ಕೀಚಕನನ್ನೊದೆದು ಅವನ ಕಾಟವನ್ನು ತಪ್ಪಿಸಿದನು. ಬಳಿಕ ದ್ರೌಪದಿ ಅಂತಃಪುರಕ್ಕೆ ದುಃಖದಲ್ಲಿ ಹಿಂದಿರುಗಿದಾಗ ಸುದೇಷ್ಣೆಯೂ ಬಾಯುಪ

ಚಾರಕ್ಕೆ ಸಮಾಧಾನದ ಎರಡು ಮಾತುಗಳನ್ನಾಡಿದಳು. ಆದರೆ ದುಷ್ಟನಾದ ಕೀಚಕನು ಇಂದಲ್ಲದಿದ್ದರೆ ನಾಳೆಯಾದರೂ ತನ್ನ ಮೇಲೆ ಮತ್ತೆ ಕೈಮಾಡದೆ ಬಿಡುವನೆ ? ಈ ಮಾನಹಾನಿಯ ಸಂಕಟವನ್ನು ಯಾರಿಗೆ ಹೇಳಿಕೊಳ್ಳುವುದು ? "ಯಮಸುತಂಗಱುಹುವೆನೆ ಧರ್ಮಕ್ಷಮೆಯು ಗರ ಹೊಡೆದಿಹುದು ; ಪಾರ್ಥನು ಮಮತೆಯುಳ್ಳವನೆಂಬೆನೇ ತಮ್ಮಣ್ಣನಾಜ್ಞೆಯಲಿ ಭ್ರಮಿತನಾಗಿಹನು." ಭೀಮನೊಬ್ಬನೇ "ಮಿಡುಕುಳ್ಳ ಗಂಡನು"; ಅವನೇ ಇಲ್ಲಿಗೆ ತಕ್ಕವನು. ಅವನಲ್ಲೂ ಹುರುಳಿಲ್ಲದಿದ್ದರೆ ವಿಷಪಾನವೇ ಸರಿ—ಎಂದು ನಿಶ್ಚಯಿಸಿ, ಆ ದಿನ ರಾತ್ರಿ ದ್ರೌಪದಿ ಬಾಣಸದ ಮನೆಗೆ ಬರುವಳು. ತನ್ನ ದುಃಖವು ಎಲ್ಲೆ ಮೀಱಿರುವ ಈ ಸಂದರ್ಭದಲ್ಲೂ ಅವಳು ಅಡಿಗೆಯ ಪರಿಕರಗಳ ವೈಭವವನ್ನು ಕಂಡು "ಆರಲಱಿದನೊ ಭೀಮನೀ ಸೂವಾರ ವಿದ್ಯೆಯ ಭಾಪು ವಿಧಿ ಮುನಿದಾರನಾವಂಗದಲಿ ಬರಿಸದು !" ಎಂದು ವ್ಯಸನದೊಡನೆ ನಸುನಗದೆ ಇರಲಾರಳು. ಇಲ್ಲಿ ಮುಂದೆ ಭೀಮ ದ್ರೌಪದಿಯರಿಗೆ ನಡೆಯುವ ಸಂಭಾಷಣೆ ಕೀಚಕ ವೃತ್ತಾಂತದಲ್ಲಿ ಮುಖ್ಯವಾದ ರಸಸ್ಥಾನ. ನಾರಣಪ್ಪನು ಈ ವೀರ ಪಾತ್ರಗಳ ಮನಸ್ಸನ್ನು ಹೊಕ್ಕು ಮಾತುಗಳನ್ನು ಆಡಿಸಿದ್ದಾನೆ.

ದ್ರೌಪದಿ ಬಂದಾಗ ಭೀಮನು ದಿನದ ದುಡಿತದ ಬಳಲಿಕೆಯಿಂದಲೋ ಏನೋ ಭಾರದ ನಿದ್ದೆಯಲ್ಲಿದ್ದನು. ಅವನು ತನ್ನನ್ನು ಹೇಗೆ ಕಾಣುವನೋ ಎಂಬ ಶಂಕೆ ಅವಳಿಗೆ ಸಹಜವಾಗಿ ಹುಟ್ಟಿತು. ಆದರೂ ನೋಡಿಬಿಡೋಣವೆಂದು ಮೆಲ್ಲನೆ ಅವನ ಗಲ್ಲವನ್ನು ಹಿಡಿದಲುಗಿ ಎಬ್ಬಿಸಿದಳು. ತನ್ನ ದುಗುಡದ ಮೋರೆಯನ್ನು ಭೀಮನು ನೋಡಿ ಕಾರಣವನ್ನು ಕೇಳುತ್ತಲೂ ಅವಳು ಒಂದೇ ಮಾತಿನಲ್ಲಿ ಕೀಚಕನಿಂದಾದ ಪರಿಭವವನ್ನು ಜ್ಞಾಪಿಸಿ, "ಎನ್ನನವ ಬೆಂಬಳಿಯ ಬಿಡ ; ನಾನಿನ್ನು ಬದುಕುವಳಲ್ಲ ; ಪಾತಕ ನಿನ್ನ ತಾಗದೆ ಮಾಣದು" ಎಂದಳು. ಈ ಮಾತನ್ನು ಕೇಳಿ ಭೀಮನಿಗೆ ಕೋಪ ಬಂದಿತು. ಐದು ಜನ ಗಂಡಂದಿರಿದ್ದರೂ, ದ್ರೌಪದಿ ಕಷ್ಟಕ್ಕೆ ಸಿಕ್ಕಿದಾಗ ಬರುವುದೆಲ್ಲ ತನ್ನೊಬ್ಬನ ಬಳಿಗೇ. ತಾನಾದರೂ ಅವಳ ಹಿಂಸಕರನ್ನು ಇಚ್ಛೆ ಬಂದಂತೆ ನಿಗ್ರಹಿಸುವುದಕ್ಕುಂಟೆ ? ಅಣ್ಣನ ಆಜ್ಞೆ ಹೆಜ್ಜೆಹೆಜ್ಜೆಗೂ ಕೈಯನ್ನು ಕಟ್ಟುತ್ತಿದೆ. ಹೀಗಾಗಿ ಭೀಮನಿಗೆ "ಈ ಹುದುವಿನ ಗಂಡತನ" ರೋಸಿಹೋಯಿತು : ನನಗಿನ್ನು ನಿನ್ನ ಸಂಬಂಧವಿಲ್ಲ ; ಮಿಕ್ಕ ನಾಲ್ವರಲ್ಲಿ ಹೇಳಿಕೋ ಹೋಗು ಎಂದುಬಿಟ್ಟನು. ಮಿಕ್ಕವರು "ಮಾನಾರ್ಥವೆನೆ

ನಿರ್ಗಮಿಸುವರು, ನೀನಲ್ಲದುಳಿದವರುಚಿತಬಾಹಿರರು" ಎಂದು ದ್ರೌಪದಿ ಕೈ ಮುಗಿದು ಬೇಡಿಕೊಂಡರೂ, ಐದು ಜನ ಗಂಡಂದಿರು ಒಬ್ಬಳನ್ನು ಆಳಲಾರಿರಿ, ನೀವು ಗಂಡರೋ ಭಂಡರೋ ಎಂದು ಹಂಗಿಸಿದರೂ ಅವನು ಮಿಸುಕಲಿಲ್ಲ. "ಈ ನಪುಂಸಕರೊಡನೆ ಹುಟ್ಟಿದ ನಾನು ಮೂಗುಳ್ಳವನೆ!" ನೀನು ಇಷ್ಟಬಂದಂತೆ ಹಂಗಿಸು. ಭೀಮನು "ಹೆಣ್ಣ ಹರಿಬಕ್ಕೋಸುಗವೆ ತಮ್ಮಣ್ಣನಾಜ್ಞೆಯ ಮೀಱಿದ" ನೆಂದು ಜನರು ಆಡಿಕೊಂಡರೆ ನಾನು ಕೇಳಲಾರೆ. ಅರ್ಜುನನ ಬಳಿಗೋ ಯುಧಿಷ್ಠಿರನ ಬಳಿಗೋ ಹೋಗಿ ಅವರನ್ನು ಮರುಗಿಸು. ನಾವು ನಿನ್ನ "ಸೂಳುಪಾಳೆಯ" ವನ್ನು ಬಿಟ್ಟವರು. "ನಮ್ಮೊಡನೆ ಫಲಸಿದ್ಧಿಯಿಲ್ಲ"—ಎಂದು ಭೀಮನು ಒಳಗಿನ ಬೇಗೆಯನ್ನು ಮೆಟ್ಟಿಕೊಂಡು ತೆಪ್ಪಗೆ ಕುಳಿತನು. ನೆಚ್ಚಿದ್ದ ಒಬ್ಬನೂ ಹೀಗೆ ಕೈಬಿಡಲು ದ್ರೌಪದಿ ಏನು ಮಾಡಿಯಾಳು: ನನ್ನಂಥ ಹೆಂಗಸರೂ ಭೀಮನಂಥ ಗಂಡಸರೂ ಇನ್ನು ಹುಟ್ಟದಿರಲಿ. ಯಾವ ವಿಷವನ್ನು ಕುಡಿಯಲಿ, ಯಾವ ಬೆಂಕಿಗೆ ಬೀಳಲಿ; "ಸಾವು ಸಮನಿಸದೆನಗೆ" ಎಂದು ಹಲುಬಿದಳು. ಹಾಗೆಯೇ ತನ್ನ ಬದುಕಿನ ಕಷ್ಟವೆಲ್ಲ ನೆನಪಿಗೆ ಬಂದಿತು: ತಂದೆ ಪಾಂಚಾಲರಾಯ; ಗಂಡಂದಿರು ಪಾಂಡವರು—"ಗೀರ್ವಾಣರಿಂ ಮಿಗಿಲು." ಇಂಥವಳಿಗೆ ಈಗ ಒದಗಿರುವ ಅವಸ್ಥೆಯೋ—"ವಿರಾಟನ ವನಿತೆಯರುಗಳ ಮುಡಿಯ ಕಟ್ಟುವ ತನುವ ತಿಗುರುವ ಕಾಲನೊತ್ತುವ ಕೆಲಸದುತ್ಸಾಹ!" ಪಾಂಡವರ ಸಾಧುತನವನ್ನು ಸ್ಮರಿಸಿ ಅವಳ ರೋಷ ಹೆಚ್ಚಿತು: "ಹಗೆಗಳಿಗೆ ತಂಪಾಗಿ ಬದುಕುವ ಮುಗುದರು ....ಭಂಗಕೆ ಹೆಗಲ ಕೊಟ್ಟಾನುವ ವಿರೋಧಿಗಳು" ಪಾಂಡವರಲ್ಲದೆ ಇನ್ನು ಯಾರು! ಪಾಪಿಗಳಿರ, ವೀರರಾಗಿ ಅರಸರಾಗಿ ನನ್ನೊಬ್ಬಳನ್ನು ಆಳಲಾರಿರಿ, ಅಪಕೀರ್ತಿಗೆ ಅಳುಕಲಾರಿರಿ. "ಕೂಳುಗೇಡಿಂಗೊಡಲ ಹೊರೆವಿರಿ."

ಧರೆಯ ಭಂಡಾರವನು ಪುರವನು
ಕರಿ ತುರಗ ರಥ ಪಾಯದಳವನು
ಕುರುಕುಲಾಗ್ರಣಿ ಸೆಳೆದುಕೊಂಡನು ನಿಮ್ಮ ಹೊಜಿವಡಿಸಿ,
ದುರುಳ ಕೀಚಕಗೆನ್ನ ಕೊಟ್ಟಿರಿ,
ಪರಿಮಿತದಲಿರವಾಯ್ತು ನಿಮ್ಮೈ
ವರಿಗೆ ಲೇಸಾಯ್ತು!....

"ಲೋಗರ ಸೇವೆಯಲಿ ಬೆಂದೊಡಲ ಹೊರೆವಿರಿ!—ಸಾವವಳು ನಿಮಗಂಜ

ಲೇಕೆ ?" ಎಂದು ಮುಟ್ಟಿಮೂದಲಿಸಿದಳು. ಈ ವಾಗ್ಝರಿಯನ್ನು ಭೀಮನು ಸುಮ್ಮನೆ ಕೇಳುತ್ತಾ ಕುಳಿತಿದ್ದಾನೆ. ಅವನ ಮನಸ್ಸು ಇನ್ನೂ ಕರಗಿದಂತೆ ಕಾಣಲಿಲ್ಲ. ತನಗೆ ಮರಣವೇ ಸಿದ್ಧವೋ ? ಕೊನೆಯ ಬಾಣವನ್ನು ದ್ರೌಪದಿ ಅವನ ಮೇಲೆಸೆದಳು :

ಭೀಮ ಕೊಟ್ಟೈ ತನಗೆ ಸಾವಿನ
ನೇಮವನು ; ನಿಮ್ಮಣ್ಣನಾಜ್ಞೆ ವಿ
ರಾಮವಾಗದೆ ಬದುಕಿ, ಧರ್ಮದ ಪ್ರೈಸಿರಿಯನಱಿದು,
ಕಾಮಿನಿಯ ಕೇಳಿಯಲಿ ನೆನೆವುದು ;
ತಾಮಸದಿ ತಾ ಮೀಱಿ ನಡೆದು
ದ್ದಾಮತೆಯ ಸೈರಿಸುವುದು—ಎಂದೆಱಗಿದಳು ಚರಣದಲಿ !

ಈ ಕರುಳು ಇರಿಯುವ ಮಾತಿಗೆ ಯಾವ ಗಂಡಸಿನ ಮನಸ್ಸು ತಾನೆ ಕರಗುವುದಿಲ್ಲ ! ಹೆಣ್ಣಿನ ತಂಟೆ ಇನ್ನು ಬೇಡವೆಂದು ರೋಷವನ್ನೆಲ್ಲಾ ಮೂಟೆ ಕಟ್ಟಿ ಇಟ್ಟಿದ್ದ ಭೀಮನೂ ಮತ್ತೆ ಕೆರಳಿದನು ; ಕಂಬನಿದುಂಬಿದನು ; "ಹಗೆಗಳನು ಹಿಂಡಿದನು ಮನದೊಳಗೆ." ದ್ರೌಪದಿಯನ್ನು ತೆಗೆದಪ್ಪಿ, ಕಂಬನಿಯನ್ನು ಮಿಡಿದು ಕುರುಳುಗಲ್ಲಗಳನ್ನು ಸವರಿದನು. ಅಣ್ಣನ ಆಜ್ಞೆಯನ್ನು ಮೀರಿದೆನು ; ನಿನ್ನ ಕೆಲಸವಾಯಿತು, ಹೋಗು—ಎಂದನು. ಅವನಿಗೆ ಇನ್ನು ಯಾರ ಅಡ್ಡಿಯೂ ಇಲ್ಲ, ಯಾವ ತಡೆಯೂ ಇಲ್ಲ. ಕೊಟ್ಟ ಮಾತಿನಂತೆ ಮರುದಿನ ರಾತ್ರಿ ಸ್ತ್ರೀ ವೇಷದಲ್ಲಿ ಕೀಚಕನನ್ನು ಸಂಧಿಸಿ ಧ್ವಂಸಮಾಡುವನು. ಕೀಚಕನ ಮರಣದ ಸೇಡನ್ನು ತೀರಿಸಿಕೊಳ್ಳಲು ದ್ರೌಪದಿಗೆ ಹಿಂಸೆಕೊಟ್ಟ ಉಪಕೀಚಕರನ್ನು ಅವರ ಅಣ್ಣನ ಹಿಂದೆಯೇ ಯಮಪುರಕ್ಕೆ ಅಟ್ಟುವನು.

ಭೀಮ ದ್ರೌಪದಿಯರ ಮೇಲಿನ ಸಂವಾದದಲ್ಲಿ ಅಲ್ಲಲ್ಲಿ ಒಂದು ಮಾತು ಬಿರುಸಾಯಿತೆಂದೂ, ದ್ರೌಪದಿ ಲಜ್ಜೆಯ ಎಲ್ಲೆಯನ್ನು ಮೀರಿದಳೆಂದೂ ತೋರಬಹುದು. ಆದರೆ ಅವಳ ಅಸಾಮಾನ್ಯವಾದ ದುಃಖವನ್ನು ಜ್ಞಾಪಿಸಿಕೊಂಡರೆ ಈ ಕ್ಷುದ್ರವಾದ ಆಕ್ಷೇಪಣೆಗಳೆಲ್ಲವೂ ಅಡಗಿ ಹೋಗುತ್ತವೆ. ದ್ರೌಪದಿಗೆ ಮಾನಭಂಗ ವೊದಗುವುದಕ್ಕೆ ಇದು ಮೂರನೆಯ ಸಲ : "ಮಂದಿಗೆಳೆದನು ಪಾಪಿ ಕೌರವ ನಂದು ಮುಂದಲೆವಿಡಿದು : ಸೈಂಧವ ಬಂದು ಬಳಿಕಾರಣ್ಯವಾಸದೊಳೆನ್ನನೆಳೆದೊಯ್ದು ; ಇಂದು ಕೀಚಕನಾಯ ಕಾಲಲಿ ನೊಂದೆನು !" ಇಂಥ ವೇಳೆಯಲ್ಲಿ

ಅವಳು ಮೃದುವಾದ ಮಾತುಗಳನ್ನು ಆಯುತ್ತಾ ಕುಳಿತುಕೊಳ್ಳಬಹುದೆ? ಭೀಮನನ್ನು ಚುಚ್ಚುವ ಗಂಡುಮಾತುಗಳನ್ನಾಡಿ ಅವನನ್ನು ಕೆರಳಿಸದಿದ್ದರೆ ಅವಳಿಗೆ ಕೀಚಕನ ಕೈಯಿಂದ ನಿಸ್ತಾರವೇ ಇಲ್ಲ. ಈ ಉದ್ದೇಶವನ್ನು ಅವಳು ಎಷ್ಟು ಚೆನ್ನಾಗಿ ಸಾಧಿಸಿದ್ದಾಳೆ! ಮರುಕದಿಂದ ಮೊದಲಿಗೆ, ರೋಷದಿಂದ ಕಂಬನಿಗೆ, ಅವಳ ಹೃದಯದ ಬೇಗೆ ಹೇಗೆ ಹಾಯುತ್ತದೆ! ಆದರ ಕಿಚ್ಚಿನಲ್ಲಿ ವಜ್ರಕರ್ಕಶವಾದ ಮನಸ್ಸೂ ಕರಗಲೇ ಬೇಕು. ಇನ್ನು ಅವಳ ಪ್ರಿಯತಮನಾದ ಭೀಮನ ಮಾತೇನು!

ಈ ಪ್ರಸಂಗದಲ್ಲಿ ನಮ್ಮ ಗಮನವೂ ಸಹಾನುಭೂತಿಯೂ ಮುಖ್ಯವಾಗಿ ದ್ರೌಪದಿಯಕಡೆಗೇ ಹರಿಯುವುದು ಸಹಜವಾಗಿದೆ. ಕೀಚಕನದು ದುಷ್ಟವರ್ತನೆ. ಅವನು ದ್ರೌಪದಿಗೆ ಕೊಟ್ಟ ಕೋಟಲೆಯನ್ನೂ, ಅವಳನ್ನು ಒರಟುತನದಿಂದ ಎಳೆದಾಡಿದ್ದನ್ನೂ ನೋಡಿ ಭೀಮನಂತೆ ನಮ್ಮ ಮನಸ್ಸೂ ಕನಲುತ್ತದೆ. ಭೀಮನ ತೋಳಿಗೆ ಸಿಕ್ಕಿ ಅವನು ಮಾಂಸದ ಮುದ್ದೆಯಾದಾಗ ದ್ರೌಪದಿಯಂತೆ ನಮಗೂ ಸಮಾಧಾನ ಹುಟ್ಟುತ್ತದೆ. ಕವಿಯ ಭಾವವೂ ಹೀಗೆಯೇ. ಆದರೆ ಅವನು ಕೀಚಕನ ಹೃದಯವನ್ನೂ ನಮಗೆ ತೆರೆದು ತೋರಿಸಿ ಅವನ ವಿಷಯಕ್ಕೂ ನಮ್ಮನ್ನು ಕ್ಷಣಕಾಲ ಮರುಗಿಸದೆ ಬಿಟ್ಟಿಲ್ಲ. ದ್ರೌಪದಿಯ ರೂಪವು ಕೀಚಕನನ್ನು ಆಕರ್ಷಣ ಮಂತ್ರದಂತೆ ಸೆಳೆದು ಕಟ್ಟಿತೆಂಬುದು ಕುಮಾರವ್ಯಾಸನ ನಿರೂಪಣೆಯಲ್ಲಿ ಬಲು ಚೆನ್ನಾಗಿ ವ್ಯಕ್ತವಾಗುತ್ತದೆ. "ನಟ್ಟ ದೃಷ್ಟಿಯ ತೆಗೆಯಲಾಱದೆ ಸೋತು ಕೀಚಕ ಪಾತಕವ ನೆನೆದ." "ದ್ರುಪದತನುಜೆಯನಾಲಿಯಲಿ ನುಂಗಿದನು." "ಮುಂಗಾಣಿಕೆಯಲೇ ಸೂಱೆವೋದುದು ಮನದ ಸರ್ವಸ್ವ; ತ್ರಾಣ ಸಡಿಲಿತು; ಬುದ್ಧಿ ಕದಡಿ"ತು. ಈ ಮೋಹಪಾರವಶ್ಯದಲ್ಲಿ ಲಜ್ಜೆ ವಿವೇಕಗಳು ಎಲ್ಲಿಗೋ ಓಡಿದುವು. ದ್ರೌಪದಿ ತನ್ನನ್ನು ಎಷ್ಟು ನಿರಾಕರಿಸಿದರೂ, ತನಗೆ ನೀತಿ ಧರ್ಮಗಳನ್ನು ಎಷ್ಟು ಬೋಧಿಸಿದರೂ ಅವನ ಮನಸ್ಸಿಗೆ ನಾಟಲಿಲ್ಲ. "ಮೇಲೆ ಸದ್ಗತಿ ಬೆಂದುಹೋಗಲಿ, ಕಾಲನವರೈತರಲಿ, ಬಂಧುಗಳೇಳಿಸಲಿ, ತನ್ನವರು ಕೊಲಗಲಿ, ರಾಣಿಯರು ಬಿಡಲಿ; ಬಾಲೆ ನಿನಗಾನೊಲಿದೆ" ಎಂದು ಸಾರಿದನು. ಕಾಮನ ಬಾಣಕ್ಕೆ ಈಡಾಗಿ ಘಾಸಿಗೊಂಡ ತನ್ನ ಜೀವನವನ್ನು ಉಳಿಸೆಂದು ದ್ರೌಪದಿಗೆ ಕೈಮುಗಿದನು. ಕೀಚಕನ ವಿರಹಸಂತಾಪ ಎಷ್ಟು ಘೋರವೆಂದರೆ, ದ್ರೌಪದಿಗೂ ಅವಳ ಗಂಧರ್ವರಿಗೂ ಹೆದರುತ್ತಿದ್ದ ಸುದೇಷ್ಣೆ ಕೂಡ ಅವನ ಅಳಲಿಗೆ

ಮರುಗಿದಳು. ಈ ಪರಿಸ್ಥಿತಿಯಲ್ಲಿ ಕೀಚಕನಿಗೆ "ಬಲಿದ ಚಂದ್ರಿಕೆ ಕರಗಿ ಕಡುಗಿದ ತವರವಾದುದು"; "ಪಾಪಿಕಮಲಜ ಜಲಜಲೋಚನೆಗೇಕೆ ಮಾಡಿದನಿನಿತು ಚೆಲುವಿಕೆಯ!" ಎಂದು ಅವನು ತಲ್ಲಣಿಸಿದನು. ಕೀಚಕನು ಒರಟನೆಂಬುದು ನಿಜ, ಪಾಪಿಯೆಂಬುದು ನಿಜ. ಆದರೆ ಅವನ ಕಾಮದ ಕಿಚ್ಚನ್ನು ನಾರಣಪ್ಪನು ಈ ರೀತಿ ಚಿತ್ರಿಸಿ, ಕೀಚಕನಿಗೆ ದ್ರೌಪದಿಯ ಹುಚ್ಚಿನಲ್ಲಿ ಮನೋನಿಗ್ರಹ ಹೇಗೆ ಅಸಾಧ್ಯವಾಗಿತ್ತೆಂಬುದನ್ನು ಸ್ಫುಟಪಡಿಸಿದ್ದಾನೆ; ಕವಿಯ ವಿಶಾಲಹೃದಯದಲ್ಲಿ ಪಾಪಿಯ ಮನೋವೃತ್ತಿಯನ್ನು ಕುರಿತೂ ಅನುಕಂಪವುಂಟೆಂದು ತೋರ್ಪಡಿಸಿದ್ದಾನೆ.

ದುರಂತವಾಗಿ ಪರಿಣಮಿಸುವ ದಾಂಪತ್ಯಪ್ರೇಮದ ಕಥೆಗಳು ಸಾಹಿತ್ಯದಲ್ಲಿ ಹಲವುಂಟು; ಆದರೆ ಪಾಂಡು ಮಾದ್ರಿಯರ ಕಥೆಯಷ್ಟು ವಾಚಕರ ಕರುಳನ್ನು ಹಿಂಡುವವು ಅತಿವಿರಳ. ಈ ಸಂದರ್ಭವೇ ಅಷ್ಟು ಕರುಣಾರ್ದ್ರವಾದದ್ದು. ವ್ಯಾಸಭಾರತದಲ್ಲೂ ಪಂಪಭಾರತದಲ್ಲೂ ಅದರ ನಿರೂಪಣೆ ಉತ್ತಮವಾಗಿ ಬಂದಿದೆ. ಆದರೆ ಈ ದುರಂತ ಕಥೆಯ ಆಳವನ್ನು ಅಳೆದು ಪೂರ್ಣರಸವನ್ನು ಹಿಳಿದಿರುವವನು ನಾರಣಪ್ಪನೇ ಎಂದು ಹೇಳಿದರೆ ಅದು ಹಿಂದಿನ ಪೂಜ್ಯಕವಿಗಳಿಗೆ ಅಗೌರವದ ಮಾತಲ್ಲ. ಕನ್ನಡ ಭಾರತದಲ್ಲಿ ಈ ಸಂದರ್ಭವು ಉಜ್ಜ್ವಲವಾದ ಸರ್ವಾಂಗಪೂರ್ಣವಾದ ಒಂದು ಬಿಡಿ ವಜ್ರದಂತೆ ಹೊಳೆಯುತ್ತದೆ.

ಯಾವುದೋ ವಿಷಮುಹೂರ್ತದಲ್ಲಿ ಪಾಂಡುರಾಜನು ಬೇಟೆಗಾಗಿ ಹೊರಟು, ಮೃಗರೂಪದಿಂದ ವಿಹರಿಸುತ್ತಿದ್ದ ಋಷಿಮಿಥುನಕ್ಕೆ ಅರಿಯದೆ ಅಂಬೆಸೆದನು; ಹೆಣ್ಣನ್ನು ಕೊಂದನು. ಇದರ ಫಲವಾಗಿ "ಎಲವೊ ರಾಜಬ್ರುವನೆ, ತನ್ನಯ ಲಲನೆಯೊಡನಿರೆ ಕೊಂದೆ; ನಿನ್ನಯ ಲಲನೆಯನು ನೀ ಕೂಡಿದಾಗಳೆ ಮರಣ ನಿನಗಹುದು" ಎಂಬ ಘೋರವಾದ ಋಷಿಶಾಪ ಅವನಿಗೆ ತಾಗಿತು. ಈಗ ಪಾಂಡುವಿನ ಸ್ಥಿತಿಯನ್ನು ನಾವು ಪರಿಭಾವಿಸಬೇಕು. ಅವನಿಗಿನ್ನೂ ಹರೆಯ; ಸುಂದರಿಯರಾದ ಇಬ್ಬರು ಹೆಂಡತಿಯರು; ಅಣ್ಣನು ಕುರುಡನಾದ್ದರಿಂದ ರಾಜ್ಯಸೂತ್ರವೂ ತನ್ನ ಕೈಗೇ ಬಂದಿದೆ. ಇಷ್ಟು ರಮ್ಯವಾದ ಬಾಳಿನ ಬುಡಕ್ಕೇ ಶಾಪದ ಸಿಡಿಲು ಬಡಿಯಿತು. ಋಷಿಗಳನ್ನು ಕೊಂದ ಘೋರ ವ್ಯಥೆ, ಸಂಸಾರಸುಖವು ಭಗ್ನವಾದ ದುಮ್ಮಾನ—ಇದರಿಂದ ಪಾಂಡು ಒಮ್ಮೆಯೇ ತೀವ್ರವೈರಾಗ್ಯವನ್ನು ಅವಲಂಬಿಸಿದನು. ತನ್ನ ಸರ್ವಸ್ವವನ್ನೂ ದಾನಮಾಡಿ ಶತಶೃಂಗಶೈಲಕ್ಕೆ ಹೋಗಿ

ಅಲ್ಲಿ ಋಷಿಸನ್ನಿಧಿಯಲ್ಲಿ ಪರಮಯೋಗಿಯಾಗಿ ನೆಲಸಿದನು. ಕುಂತಿ ಮಾದ್ರಿಯರು ಅವನನ್ನು ಹಿಂಬಾಲಿಸಿ ಭೀತಿಭಕ್ತಿಗಳಿಂದ ಶುಶ್ರೂಷೆಮಾಡುತ್ತಾ ನಿಂತರು. ಕುಂತಿಗೆ ದುರ್ವಾಸರು ಉಪದೇಶಿಸಿದ್ದ ದಿವ್ಯಮಂತ್ರವನ್ನು ಪಾಂಡುವಿನ ಅಪ್ಪಣೆಯಂತೆ ಅವರಿಬ್ಬರೂ ಜಪಿಸಿ ದೇವತೆಗಳ ಅನುಗ್ರಹದಿಂದ ಐವರು ಮಕ್ಕಳನ್ನು ಕೆಲವು ವರ್ಷಗಳಲ್ಲಿ ಪಡೆದರು. ಮಕ್ಕಳ ಶೌರ್ಯಾವಲೋಕನ, ಸತಿಯರ ಪರಿಚರ್ಯೆ, ಋಷಿಗಳ ಸಹವಾಸ, ತಪಸ್ಸಿನ ಆನಂದ—ಇದರಲ್ಲಿ ಪಾಂಡುವಿಗೆ ಹಸ್ತಿನಾವತಿಯ ಸಕಲೈಶ್ವರ್ಯವೂ ತೃಣ ಸಮಾನವಾಯಿತು.

ಹೀಗೆ ಪೀಠಿಕೆಯನ್ನು ರಚಿಸಿ ಕುಮಾರವ್ಯಾಸನು ಮುಂದಿನ ಸಂದರ್ಭವನ್ನು ಎತ್ತಿಕೊಳ್ಳುತ್ತಾನೆ. ಕಾಲ ಕಳೆಯಿತು; "ವರುಷ ಹದಿನಾಱಯ್ತು ಧರಣೀಶ್ವರನ ಹಿರಿಯ ಮಗಂಗೆ, ಭೀಮಗೆ ವರುಷ ಹದಿನೈದು, ಅರ್ಜುನಗೆ ಹದಿನಾಲ್ಕು, ಹದಿಮೂಱು ಕಿಱಿಯರಿಬ್ಬರಿಗೆ."—ಮಕ್ಕಳು ಪ್ರಬುದ್ಧರಾಗುತ್ತ ಬಂದರು. ಪತ್ನಿಯರು ಉದ್ದಕ್ಕೂ ಜೊತೆಯಲ್ಲೇ ಇದ್ದರೂ ಪಾಂಡು ಮನಸ್ಸನ್ನು ಅಸ್ಖಲಿತ ಯೋಗದಲ್ಲೇ ನೆಲೆಗೊಳಿಸಿದ್ದನು. ಯೌವನದಲ್ಲೇ ಇಂಥ ಉಗ್ರ ಬ್ರಹ್ಮಚರ್ಯವನ್ನು ಪಾಲಿಸಿದವನಿಗೆ ಇನ್ನು ವಯಸ್ಸು ಇಳಿಮುಖವಾಗಿರುವಾಗ ಮನಸ್ಸು ಎಷ್ಟು ಶಾಂತವಾಗಿರಬೇಕು. ಆದರೆ, "ಬಂದುದೊಂದು ವಸಂತಮಯ ಸಮಯ!" "ಯೋಗಿಗೆತ್ತಿದ ಖಡುಗಧಾರೆ, ವಿಯೋಗಿಗೆತ್ತಿದ ಸಬಳ, ಅಖಿಳ ವಿರಾಗಿಗಳ ಹೆಡತಲೆಯ ದಡಿ.... ಭೋಗಿಗಳ ಕುಲದೈವ—ಎಸೆದುದು ಕುಸುಮಮಯ ಸಮಯ!" ಎಲ್ಲೆಲ್ಲೂ ಹೊಸ ಕಂಪು, ಹೊಸ ನೋಟ, ಹೊಸ ವಿಲಾಸ; ಯಾರ ಮನಸ್ಸನ್ನಾದರೂ ಸೂರೆಗೊಳ್ಳುವ ಸಮಯ ಇದು. ಇಷ್ಟೇ ಸಾಲದೆ,

ಮೊರೆವ ತುಂಬಿಯ ಗಾಯಕರ, ನಯ
ಸರದ ಕೋಕಿಳ ಪಾಠಕರ, ಬಂ
ಧುರದ ಗಿಳಿಗಳ ಪಂಡಿತರ, ಮಾಮರದ ಕರಿಘಟೆಯ,
ಅರಳಿದಂಬುಜಸತ್ತಿಗೆಯ, ಮಂ
ಜರಿಯ ಕುಸುಮದ ಚಾಮರದ, ಚಾ
ತುರ **ವಸಂತನೃಪಾಲ ನಡೆದನು ಪಾಂಡುವಿನ ಮೇಲೆ!**

ಇದುವರೆಗೂ ತನಗೆ ಸಗ್ಗದೆ ನೈಷ್ಠಿಕನಾಗಿದ್ದ ಪಾಂಡುವಿನ ಮೇಲೆ ಕೊನೆಯ ಸಲ ಕೈಮಾಡಿ ನೋಡಬೇಕೆಂದು ವಸಂತ ನೃಪನು ಸೈನ್ಯ ಸಂಪತ್ತಿನ ಕೋಲಾ

ಹಲದೊಡನೆ ದಾಳಿಯಿಟ್ಟಿದ್ದಾನೆ. (ವಸಂತನೃಪನ ಪರಿವಾರದ ವರ್ಣನೆ ಯೇನೋ ಕವಿಸಮಯ ಪರಿಚಿತವಾದದ್ದು ; ಆದರೆ "ನಡೆದನು ಪಾಂಡುವಿನ ಮೇಲೆ" ಎನ್ನುವುದು ಅದಕ್ಕೆಲ್ಲಾ ಎಷ್ಟೊಂದು ಹೊಸ ಅರ್ಥವನ್ನು ಕೊಡುತ್ತದೆ; ಸಂದರ್ಭಕ್ಕೆ ಎಷ್ಟೊಂದು ಉಚಿತವಾಗಿದೆ!) ತಪೋವನದ ಆವರಣವನ್ನೆಲ್ಲಾ ಪ್ರಣಯದ ಸುಳಿ ಸುತ್ತಿಕೊಂಡಿದೆ. ಆ ಪರಿಮಳದ ತಂಗಾಳಿಯೊಂದೇ ಸಾಕು ಯಾರ ಮನಸ್ಸನ್ನಾದರೂ ಕದಡುವುದಕ್ಕೆ. "ವನವೀಧಿಗಳ ವಳಯವ ಹೊಕ್ಕು ಮರಳಿದುದಿಲ್ಲ ವಿರಹಿಗಳು."

ಇಷ್ಟು ಉನ್ಮಾದಕವಾದ ಸನ್ನಿವೇಶದಲ್ಲಿ, ಒಂದು ದಿನ ವನದೊಳಗೆ ಆಡುತ್ತಿದ್ದ ಮಾದ್ರಿಯನ್ನು ಪಾಂಡು ಕಂಡನು. ಅಂದು ಅವಳು ರಚಿಸಿದ್ದ ಹೂವಿನ ಸಿಂಗಾರವೋ, ದೇಹದ ಲಾವಣ್ಯವೋ! "ಆವ ಚೆಲುವಿಕೆ ಶಿವಶಿವಾ ಎಂದರಸ ಬೆರಗಾದ." ಇಷ್ಟು ಕಾಲವೂ ಕಟ್ಟಿದ್ದ ದೃಷ್ಟಿಯ ತಡೆಗಳು ಒಮ್ಮೆಯೆ ಒಡೆದುವು. ಮಿಂಚಿನ ವೇಗದಲ್ಲಿ ಮೋಹದ ತುಂಬುಹೊಳೆ ಉಕ್ಕಿ ಭೋರ್ಗರೆಯಿತು. ಆ ಧೀರನ ಪ್ರತಿಜ್ಞೆಯೆಲ್ಲಾ ಮಾದ್ರಿಯ ಬಯಕೆಯಲ್ಲಿ ಮುಗಿಯಿತು. "ಮಱೆದು ಹಿಂದೆಲ್ಲವನು, ಕುಂತಿಯನಱಿಯಲೀಯದೆ, ಮೆಲ್ಲಮೆಲ್ಲನೆ ತುಱುಗಿದೆಳಲತೆ ವನದೊಳಾಡುವ ವಧುವ ಸಾರಿದನು." ಇವನು ಮರೆತರೆ ಮಾದ್ರಿ ಮರೆಯುವಳೆ? ಬೇಡ ಬೇಡ ಎಂದು ಕಾಲಿಗೆರಗಿ ಬೇಡಿದಳು ; ಋಷಿಶಾಪವನ್ನು ಜ್ಞಾಪಿಸಿದಳು ; ನಿನ್ನ ಧೈರ್ಯವೆಲ್ಲಿ ಎಂದು ಹಂಗಿಸಿದಳು ; ಮಕ್ಕಳ ಗತಿಯೇನು ಎಂದು ಎಚ್ಚರಿಸಿದಳು ; ಅವನ ಹಿಡಿತದಿಂದ ಬಿಡಿಸಿಕೊಳ್ಳಲು ಹೆಣಗಿದಳು. ಆದರೆ—

ಕೊಂಬುದೇ ಬಯಲಱತಗಿಱತದ
ಡೊಂಬಿನಾಗಮ ನೀತಿಗೀತಿಯ!
ಶಂಬರಾರಿಯ ಸಬಳವಲ್ಲಾ! ಬೇಗೆ ಮೂಡಿದುದು.
ಬೆಂಬಿಡದೆ ಮರಳಿದೊಡೆ ಮುಱಮೊನೆ
ಗೊಂಬುದೆಂಬವೊಲವನಿಪತಿಯೊ
ತ್ತಂಬರದಿ ಹಿಡಿದಬಲೆಯನು ಕೂಡಿದನು ಕಳವಳಿಸಿ.

ಆಯಿತು. ಆ ಸಮಾಗಮಸುಖದೊಂದಿಗೇ ಪಾಂಡುವಿನ ಪ್ರಾಣವಾಯುವೂ ತೇಲಿತು. "ಅಕಟ ಪಾಂಡುಮಹೀಶ, ವಿಷಕನ್ನಿಕೆಯನೆನ್ನನು ಮುಟ್ಟಿದೈ!" ಎಂದು ಮಾದ್ರಿ ತನ್ನನ್ನು ಹಳಿದುಕೊಂಡು ಅಳಲಿದಳು. ಇತ್ತ ಕುಂತಿಗೆ ಇಷ್ಟರಲ್ಲಿ

ಆತಂಕ ಮೂಡಿದೆ. ಮಾದ್ರಿ ಇಲ್ಲದ್ದನ್ನೂ ರಾಯನು ತನ್ನ ಕಣ್ಣುತಪ್ಪಿಸಿ ಎತ್ತಲೋ ಸಾಗಿದ್ದನ್ನೂ ಕಂಡಿದ್ದ ಅವಳಿಗೆ ಕೆಟ್ಟ ಶಕುನಗಳಾಗಿ ಕಳವಳ ಹೆಚ್ಚಿದೆ. ಅಷ್ಟರಲ್ಲಿ ಮಾದ್ರಿಯ ರೋದನಧ್ವನಿಯೂ ಕೇಳಿಸಲು ಅದರ ದಾರಿಯನ್ನೇ ಹಿಡಿದು ತಾಯಿಮಕ್ಕಳು ಬಂದು ಪಾಂಡುವಿನ ಅವಸ್ಥೆಯನ್ನು ಕಂಡರು; "ಮುಪ್ಪಿನಲಿ ನಿಮಗೀಯವಸ್ಥೆಯಿದೊಪ್ಪುವುದೆ!" ಎಂದು ಮರುಗಿದರು. ಬಳಿಕ ತನ್ನ ತೋಳಿನಲ್ಲಿ ನಿಡುನಿದ್ದೆಗೈದ ಪತಿಯೊಂದಿಗೆ ಮಾದ್ರಿ ಸಹಗಮನಮಾಡಿ ಕಥೆಯನ್ನು ಮುಗಿಸಿದಳು.

ಈ ಸಂದರ್ಭವನ್ನು ಚಿತ್ರಿಸುವುದರಲ್ಲಿ ನಾರಣಪ್ಪನು ಪ್ರಕಟಿಸಿರುವ ಕಲಾ ಪರಿಣತಿಯನ್ನು ಎಷ್ಟು ಶ್ಲಾಘಿಸಿದರೂ ತೀರದು. ಮೊದಲಿನಿಂದಲೂ ಇದರ ಚರಮಪರಿಣಾಮದ ಕಡೆಗೇ ಅವನು ಗುರಿಯಿಟ್ಟಿದ್ದಾನೆ. ಅದರ ವಿಷಮತೆಯನ್ನು ಪೋಷಿಸುವುದಕ್ಕಾಗಿಯೇ ಪಾಂಡುವಿನ ದೀರ್ಘನಿಶ್ಚಲ ಬ್ರಹ್ಮಚರ್ಯವನ್ನು ನಮ್ಮ ಕಣ್ಣಮುಂದೆ ಎತ್ತಿಹಿಡಿದಿದ್ದಾನೆ. ಇಂಥವನ ಮನಸ್ಸನ್ನು ಮುಪ್ಪಿನಲ್ಲಿ ಕದಲಿಸುವ ಸನ್ನಿವೇಶ ಎಷ್ಟು ಪ್ರಬಲವಾಗಿರಬೇಕೆಂಬುದನ್ನು ಅರಿತೇ ವಸಂತದ ದಾಳಿಯನ್ನು ಅಷ್ಟು ಉಜ್ಜ್ವಲವಾಗಿ ವರ್ಣಿಸಿದ್ದಾನೆ. ಮಿಕ್ಕ ಕಾವ್ಯಗಳಲ್ಲಿ ಕೇವಲ ಬಾಹ್ಯಾಡಂಬರವಾಗುವ ಋತುವರ್ಣನೆ ಇಲ್ಲಿ ಕಥೆಯೊಂದಿಗೆ ಹಾಸುಹೊಕ್ಕಾಗಿ ಮಿಳಿತವಾಗಿದೆ. ಪಾಂಡುವಿನ ಪತನಕ್ಕೆ ಪ್ರಕೃತಿಯೇ ಸಂಚುಮಾಡಿತೆಂದೂ, ದೈವ ಹಠ ತೊಡದಿದ್ದರೆ ಅವನ ನಿಷ್ಠೆ ಸಡಿಲುತ್ತಿರಲಿಲ್ಲವೆಂದೂ ನಮಗೆ ಭಾವನೆ ಹುಟ್ಟುವುದು ಇದರಿಂದಲೇ. ಇಷ್ಟೆಲ್ಲ ಸನ್ನಾಹಮಾಡಿದ ಬಳಿಕ, ಮಾದ್ರಿಯ ಲಾವಣ್ಯ ವೈಖರಿಯನ್ನೂ ಲಂಬಿಸುತ್ತಾ ಕುಳಿತರೆ ಭಾವಸಮಾಧಿ ಸಡಿಲಿಬಿಡುವುದೆಂದು ಕವಿಗೆ ಗೊತ್ತು. ಆದ್ದರಿಂದ ಎರಡೇ ಮಾತಿನಲ್ಲಿ ಅದನ್ನು ಸೂಚಿಸಿ, ಅದರ ಸೆಳವಿನಲ್ಲಿ ಪಾಂಡುವಿನ ಸ್ಥೈರ್ಯವು ಒಂದೇ ತಡವೆಗೆ ಕೊಚ್ಚಿಹೋದ ಅಂಶಕ್ಕೆ ನೆಟ್ಟಗೆ ಸಾಗಿದ್ದಾನೆ. ಹಿಂದೆ ನಿರೋಧವು ಅಷ್ಟು ಬಿಗಿಯಾಗಿದ್ದುದರಿಂದಲೇ ಇಂದು ಕಟ್ಟೊಡೆದ ಮೋಹವೂ ಅಷ್ಟು ರಭಸದಿಂದ ನುಗ್ಗಿತು. ಹಿರಿಯ ಹೆಂಡತಿಯ ಕಾವಲು, ಮೋಹದವಳ ನೀತಿಬೋಧೆ—ಎಲ್ಲವೂ ನಿಷ್ಫಲವಾದುವು. ಹೆಡತಲೆಯ ಹಾವಿನಂತೆ ಸಮಯವನ್ನು ಕಾಯುತ್ತಿದ್ದ ಋಷಿಶಾಪವು ಫಲಿಸಿಬಿಟ್ಟಿತು. ಇಲ್ಲಿ ಯಾವುದಕ್ಕೆ ಬೆರಗುಪಡೋಣ: ಪಾಂಡುಯೋಗಿ ಇಷ್ಟುದಿನದ ಮೇಲೆ ಮೋಹದ ಸುಳಿಯಲ್ಲಿ ಮುಳುಗಿದ್ದಕ್ಕಾಗಿಯೆ, ಗಂಡಹೆಂಡಿರ ಸಹಜ ಸಮಾಗಮಕ್ಕೆ

ಈ ರೀತಿಯ ಘೋರಪರ್ಯವಸಾನ ತಟ್ಟಿದ್ದಕ್ಕಾಗಿಯೆ !

ವಿಷಮ ಪರಿಣಾಮದ ಪ್ರಣಯಸಂದರ್ಭಗಳಲ್ಲಿ ಇನ್ನೊಂದನ್ನು ಪರಿಶೀಲಿಸುವುದು ಉಳಿದಿದೆ. ಅರ್ಜುನನು ಇಂದ್ರಕೀಲ ಪರ್ವತದಲ್ಲಿ ತಪಸ್ಸು ಮಾಡುತ್ತಿದ್ದಾಗ ಕಿರಾತವೇಷದ ಶಿವನೊಡನೆ ಸೆಣಸಿ ಮೆಚ್ಚಿಸಿ ಅವನಿಂದ ಪಾಶುಪತಾಸ್ತ್ರವನ್ನು ಪಡೆಯುವನಷ್ಟೆ. ಈ ವಿಜಯವನ್ನು ಕೊಂಡಾಡಿ ತನ್ನ ತಂದೆಯಾದ ಇಂದ್ರನು ಕಳಿಸಿದ ರಥದಲ್ಲಿ ಬಳಿಕ ಅಮರಾವತಿಗೆ ಅವನು ತೆರಳುವನು. ಅಲ್ಲಿ ಮಗನನ್ನು ಇಂದ್ರನು ದಿವ್ಯಸಭೆಯಲ್ಲಿ ಎದುರುಗೊಂಡು ಸನ್ಮಾನಿಸುತ್ತಾನೆ. ಆಗ ಅರ್ಜುನನ ಮನೋರಂಜನೆಗೋಸ್ಕರ ಅಪ್ಸರೆಯರ ಗೀತನಾಟ್ಯಗಳು ನಡೆಯುತ್ತವೆ. ಅವರಲ್ಲಿ ಉರ್ವಶಿಯ ಅಮಾನುಷರೂಪಾತಿಶಯಕ್ಕೆ ವಿಸ್ಮಯಪಟ್ಟು ಅರ್ಜುನನು ಸಹಜಕುತೂಹಲದಿಂದ ಎವೆಯಿಕ್ಕದೆ ನೋಡುತ್ತಿದ್ದುದನ್ನು ಇಂದ್ರನು ಕಂಡು, ತನ್ನ ಮಗನ ಭಾವವನ್ನು ಬೇರೆ ವಿಧವಾಗಿ ಗ್ರಹಿಸುವನು. ಆ ದಿನ ರಾತ್ರಿ ಚಿತ್ರಸೇನನೆಂಬ ಗಂಧರ್ವನಿಗೆ ಈ ಸಂದರ್ಭವನ್ನು ತಿಳಿಸಿ, ಉರ್ವಶಿಯನ್ನು ಅರ್ಜುನನ ಸೇವೆಗೆ ಕಳಿಸಬೇಕೆಂದು ನೇಮಿಸುವನು. ಉರ್ವಶಿ ಈ ಮೊದಲೆ ಅರ್ಜುನನ ಖ್ಯಾತಿಯನ್ನು ಅರಿತಿರಬೇಕು. ಚಿತ್ರಸೇನನ ಮಾತನ್ನು ಕೇಳುತ್ತಲೂ ಅವಳಿಗೆ ಅರ್ಜುನನಲ್ಲಿ ಅನುರಾಗವುದಿಸಿತು. ದಣಿಯ ಅಪ್ಪಣೆಗೆ ತನ್ನ ಅಭಿಲಾಷೆಯೂ ನೆರೆಯಿತು. ಹೀಗೆ ಮೋಹದಿಂದ ತಾನಾಗಿಯೇ ಬಳಿಗೆ ಬಂದ ಸುರಸುಂದರಿಯ ಪ್ರಣಯವನ್ನು ಅರ್ಜುನನು ಹೇಗೆ ಕಂಡನೆಂಬುದೇ ಪ್ರಕೃತದ ಸಂದರ್ಭ.

ಉರ್ವಶಿಯ ರೂಪ ಮಾತಿಗೆ ನಿಲುಕುವುದಲ್ಲ. ಅದು "ಕಾಮನ ಹಗೆಗೆ ಹುಟ್ಟಿದ ಧೂಮಕೇತು", "ಲೋಕಸೌಂದರ್ಯೈಕ ಸರ್ಗ." ಅಶ್ವಮೇಧ ರಾಜಸೂಯಾದಿ ಮಹಾಕ್ರತುಗಳನ್ನು ಮಾಡಿ ಸ್ವರ್ಗಸುಖವನ್ನು ಸವಿಯಲು ಬಂದ ಧರ್ಮವೀರರು ಕೂಡ ಈಕೆಯ "ಚರಣದುಂಗುಟ ತುದಿ" ಯನ್ನು ಕಾಣರು. ಒಮ್ಮೊಮ್ಮೆ ದೇವಕುಮಾರರಾದ ಜಯಂತನಳಕೂಬರರಿಗೂ ಸಮಯ ದೊರೆಯದೆ "ಮರುಗುವರು ಸೌಧದ ದಾರವಟ್ಟದಲಿ." ಇಂಥ ರಮಣಿ ಅರ್ಜುನನಿಗೆ ಮನಸೋತು ಅವನನ್ನು ಓಲೈಸಲು ಪರಿವಾರದೊಡನೆ ಬಂದಳು. "ಬಳ್ಳಿಮಿಂಚಿನ ಮಂದೆಯಲಿ ಮುರಿದಿಳಿವ ಮುಗಿಲಂದದಲಿ," ಅರ್ಜುನನ ಬೀಡಾರದ ಬಾಗಿಲಲ್ಲಿ ಪಲ್ಲಕ್ಕಿಯಿಂದ ಇಳಿದು ಅವನ ಶಯ್ಯಾಗೃಹವನ್ನು ಹೊಕ್ಕು

ಅಲ್ಲಿ ಕೆಳದಿಯರ ಭುಜದಮೇಲೆ ಕೈಯೂರಿ, ಮಲಗಿದ್ದ ತನ್ನ ಪ್ರಿಯನನ್ನು ನೋಡುತ್ತಾ ನಿಂತಳು. ಅವಳ ಮುಖಪ್ರಭೆಗೂ ದೇಹಪರಿಮಳಕ್ಕೂ ಅರ್ಜುನನ ನಿದ್ದೆ ತಿಳಿಯಿತು ; ಎದುರಿಗೆ "ಮದನಾಲಸೆ" ಉರ್ವಶಿ ನಿಂತಿದ್ದಾಳೆ. ಅವಳನ್ನು ಕಂಡಕೂಡಲೆ ಇವನ ಬಾಯಿಂದ ಹೊರಟ ಮಾತೇನು : "ಹಾ ಮಹಾ ದೇವಿಯರಲಾ !" ಈಕೆ ಪುರೂರವನ ಪತ್ನಿಯಾಗಿದ್ದವಳು—ತನ್ನ ಚಂದ್ರವಂಶದ ಜನನಿ ; ಇದರ ಮೇಲೆ ತನ್ನ ತಂದೆ ಇಂದ್ರನ ಮಾನಿನಿ, ತಾನು ಅವಳಿಗೆ ಮಗ ನಾಗಬೇಕು. ಹೀಗೆಂದು ತಿಳಿದು ಅರ್ಜುನನು ಅವಳನ್ನು ತಾಯಿಯಂತೆ ಕಂಡನು, ತಾಯಿಯಂತೆ ಗೌರವಿಸಿದನು.

ಈಗ ಉರ್ವಶಿಯ ಗತಿಯೇನು ? ಚಿತ್ರಸೇನನ ಮಾತಿನಂತೆ ಅರ್ಜುನನು ತನ್ನನ್ನು ಬಯಸಿದ್ದಾನೆಂದು ನಂಬಿ, ತನ್ನ ಹೃದಯವನ್ನು ಅರ್ಪಿಸಲು ಬಂದಳು; ಕಾಮನ ಕೋಟಲೆಗೆ ಸಿಕ್ಕಿದಳು. ಅರ್ಜುನನ ನಡೆವಳಿಕೆಯಾದರೆ ವಿಚಿತ್ರ ವಾಯಿತು. ಬಯಸಿಬಂದ ಸುಂದರಿಯೊಬ್ಬಳು ಎದುರಿಗೆ ನಿಂತಿರುವಾಗ ಹೀಗೆ ಮಾವೆ ಸಂಬಂಧಗಳನ್ನು ಹುಡುಕುವ ಇವನು ನಪುಂಸಕನೋ ಜಡನೋ ಶ್ರೋತ್ರಿ ಯನೋ ಎಂದು ಅವಳು ಸಹಜವಾಗಿ ಶಂಕಿಸಿದಳು. ಏಕೆಂದರೆ ಭೋಗಭೂಮಿ ಯಾದ ಸ್ವರ್ಗದಲ್ಲಿ ಇದುವರೆಗೆ ಈ ಬಗೆಯ ವಿಚಿತ್ರ ಸನ್ನಿವೇಶವನ್ನು ಉರ್ವಶಿ ಕಂಡಿರಲಾರಳು. ಈಗ ತನ್ನ ಮೋಹ ಹೆಚ್ಚಿಹೋದದ್ದರಿಂದ ಅವಳು ಲಜ್ಜೆಯನ್ನು ತೊರೆದು, ಇದ್ದ ಸ್ಥಿತಿಯನ್ನು ವಿವರಿಸಿ, "ಒಲಿದು ಬಂದಬಲೆಯರ ಟೆಕ್ಕರಿಗಳೆ ವುದೇ ವಿಟಧರ್ಮ ? ತಿಳಿಯಲಾ ತಾನಾವಳೆಂಬುದ ?" ಎಂದು ಬಾಯಿಬಿಟ್ಟು ಕೇಳಿದಳು. ಆದರೆ ಅರ್ಜುನನ ಪಾಲಿಗೆ ಉರ್ವಶಿ ಸರ್ವಸಾಧಾರಣೆಯಾದ ದೇವ ಗಣಿಕೆಯಲ್ಲ ; ಅವಳು ತನ್ನ ವಂಶದ ಪೂಜ್ಯಜನನಿ. ಪುರೂರವನಿಂದ ಜನ್ಮವೆತ್ತಿದ ರಾಜವಂಶದಲ್ಲಿ ತಾನು ಹುಟ್ಟಿದ್ದನ್ನು ವಿವರಿಸಿ. "ನಮ್ಮ ವಿಚಾರಿಸಿದುದಿಲ್ಲಾ ?" ಎಂದು ಅರ್ಜುನನು ವಿನಯದಿಂದ ಕೇಳುತ್ತಾನೆ. ಬಳಿಕ ಇಬ್ಬರಿಗೂ ಒಂದು ವಾಕ್ಯಾರ್ಥವೇ ನಡೆಯುತ್ತದೆ :

ಉರ್ವಶಿ—ನಿಮ್ಮ ಭೂಲೋಕದ ಮಾವೆಗಳು ಈ ದೇವಭೂಮಿಯಲ್ಲಿ ಸಲ್ಲವು :
ಯುದ್ಧಹತರಾದ ವೀರರು, ಯಜ್ಞವೆಸಗಿ ಬಂದವರು ಇವರೆಲ್ಲರಿಗೂ—
ತಂದೆ, ಅಜ್ಜ, ಭಾವ, ಮೈದುನ, ಅಣ್ಣ, ತಮ್ಮ ಎನ್ನದೆ ಎಲ್ಲರಿಗೂ—

(ನಗುತ್ತಾ) ನಾನೊಬ್ಬಳೇ. ಈ ಮಾತೇಕೆ ? "ಮಾನಿನಿಯರಿಚ್ಛೆಯ ನಱಿಯದವನು....ಕುಱಿಕಣಾ !"

ಅರ್ಜುನ—(ನಡುಗಿ ಕೈಮುಗಿದು) "ಇದು ಮನುಷ್ಯಶರೀರ ; ತದ್ಧರ್ಮದಲಿ ತನ್ನ ವಸಾನ ಪರಿಯಂತ ಇದಱೊಳವ್ಯಭಿಚಾರದಲಿ ವರ್ತಿಸಿ" ಬಳಿಕ ದೇವತೆಗಳಲ್ಲಿಗೆ ಬಂದಾಗ ದೇವದೇಹವನ್ನು ಧರಿಸಿ ಆ ಮಾರ್ಗದಲ್ಲಿ ನಡೆಯಬೇಕು.

ಊರ್ವಶಿ—ಹೌದು ಹೌದು: ಶಾಸ್ತ್ರವಿಧಿಯ ಗೆರೆಯನ್ನೂ ದಾಟದವರು ನೀವು ! ಒಬ್ಬ ಹೆಣ್ಣನ್ನು ಐದು ಜನರು ನೆರೆದಿಲ್ಲವೇ ? ನಿನಗೆ ನನ್ನಲ್ಲಿ ನಿಸ್ಪೃಹತೆ !

ಅರ್ಜುನ—ತಾಯ ನೇಮದಿಂದ ಅದು ಸಂಭವಿಸಿತು."ಜನನಿಯ ನುಡಿ ಅಲಂಘ್ಯ." ಈಗ ಕಾಮಸುಖಕ್ಕಾಗಿ ನಾನು ದುರ್ಗತಿಗೆ ಇಳಿಯಲಾರೆ.

ಊರ್ವಶಿ—ತಾಯ ನೇಮದಿಂದ ಐವರಿಗೆ ಒಬ್ಬಳ ಕೂಟವಾಗಬಹುದಾದರೆ, ನಿಮ್ಮ ತಂದೆ ಸುರರಾಯನ ವಚನವನ್ನು ಮಾತ್ರ ಮಿಾರಬಹುದೊ ? "ರಾಯನಟ್ಟಲು ಬಂದೆನು." ಮನ್ಮಥನ ಕೋಟಲೆ ಮಿಾರಿಹೋಯಿತು. "ಗರುವೆಯರು ಮೇಲಿಕ್ಕಿ ಪುರುಷನ ವರಿಸಿದೊಡೆ ಜಾಱುವರೆ ?"

ಆದರೆ ಊರ್ವಶಿಯ ತರ್ಕವಾಗಲಿ,ಅವಳ ಒಲುಮೆಯ ಮೂದಲೆಯ ಮಾತುಗಳಾಗಲಿ ಧೈರ್ಯದ ವಜ್ರಜೋಡನ್ನು ತೊಟ್ಟು ನಿಂತ ಅರ್ಜುನನ ಎದೆಗೆ ನಾಟಲಿಲ್ಲ. ತಾಯಿ ಮಗನನ್ನು ನೋಡಲು ಬಂದರೆ ತಪ್ಪೇನು ? ಇನ್ನು ತಾವು ಬಿಜಯಮಾಡಬೇಕು—ಎಂದು ನಿರ್ಧರದಿಂದ ನುಡಿದುಬಿಟ್ಟನು. ಊರ್ವಶಿಯ ಅವಮಾನ ಈಗ ತುದಿಮುಟ್ಟಿತು. ಲಜ್ಜೆ ಅಳಿದು, ಆಸೆ ಜಾರಿತು. "ರೋಷವೆರಡೆಲೆಯಾಯ್ತು." ಮುಖ ಬೆವರಿತು, ತುಟಿ ನಡುಗಿತು. "ತತ್ತರೋಷಾಯುಧನ ಮಸೆದಳು ಧಾರೆಗಂಗಳಲಿ !" ಆವೇಶದ ಮಾತುಗಳು ಮಸೆದುವು :

ಒಲಿದು ಬಂದವರಾವು, ಸೊಬಗಿನೊ
ಳೊಲಿಸಿ ಮಱುಗಿಪ ಗಂಡ ನೀನ್ ! ಅತಿ
ಸುಲಭರಾವ್, ದುರ್ಲಭನು ನೀ ದೇವೇಂದ್ರಕಟಕದಲಿ.
ಎಲೆ ನಪುಂಸಕ, ಗಂಡುವೇಷದ
ಸುಳಿವು ನಿನಗೇಕೆ !—ಎನುತ ಸತಿ ಕಳ
ವಳಿಸಿ ಕರವೆತ್ತಿದಳು : ಹಿಡಿ ಹಿಡಿ ಶಾಪವಿದೆ ಎನುತ !

"ರೌದ್ರಾಹಿಮಸ್ತಕಮಾಣಿಕ" ದಂತೆ, "ಲೋಹಧಾರೆಯ ಮಧು" ವಿನಂತೆ, "ರೂಹು ಸುಮನೋಹರ ಭಯಂಕರವಾಯ್ತು ಸುರಸತಿಯ!" ನಿಮ್ಮ ಭಾರತ ಭೂಮಿಯಲ್ಲಿ ವರುಷ ಕಾಲ ನಪುಂಸಕನಾಗಿ ಚರಿಸು ಹೋಗೆಂದು ನುಡಿದು ಊರ್ವಶಿ ನಿಲ್ಲದೆ ಹಿಂದಿರುಗಿದಳು. ಅವಳಿಗಾದ ಆಶಾಭಂಗಕ್ಕೂ ಘೋರಾವ ಮಾನಕ್ಕೂ ಇದು ಅತಿಮೃದುವಾದ ಶಾಪವೆಂದೇ ಹೇಳಬೇಕು.

ಆದರೆ ಅರ್ಜುನನಿಗೆ ಮಾತ್ರ ಇಲ್ಲಿ ತನ್ನ ತಪ್ಪೇನೆಂದು ಗೊತ್ತಾಗಲಿಲ್ಲ. "ಸುರಭವನವಧುಗಳು ನಾಗರಿಕರು; ಇವರೆತ್ತ ಭಾರತ ಭೂಗತರು ತಾವೆತ್ತ. ಇದು ಘಟಿಸಿದುದು ವಿಧಿ!" ತಾನು ಇಂದ್ರನಿಗೆ ಸೂಚಿಸಲಿಲ್ಲ, ಊರ್ವಶಿಯನ್ನು ಕರಸಲಿಲ್ಲ, ಅಪಚಾರವನ್ನು ಎಸಗಲಿಲ್ಲ, ಧರ್ಮಮಾರ್ಗವನ್ನು ಬಿಡದೆ ನಡೆದದ್ದಕ್ಕೆ ಈ ದಂಡನೆಯೆ? "ತಪವನಾಚರಿಸಿದೊಡೆ ವರಪಾಶುಪತಶರವೆನಗಾಯ್ತು; ಧರ್ಮವೆ ತಪವಲಾ ಎಂದಱಿದು ನಡೆದೊಡೆ ಷಂಡತನವಾಯ್ತು!" ಎಂದು ಈ ವಿಷಮಫಲಕ್ಕೆ ಬೆರಗಾಗಿ ವ್ಯಥೆಪಟ್ಟನು. ಬಳಿಕ ಇಂದ್ರನು ನಡೆದ ಸಂಗತಿಯನ್ನು ಚಿತ್ರಸೇನನಿಂದ ತಿಳಿದು ಮಗನ ಬಳಿಗೆ ಬಂದು ಸಂತೈಸುವನು; ಊರ್ವಶಿಯ ಶಾಪವು ಅಜ್ಞಾತವಾಸದಲ್ಲಿ ಉಪಕಾರವಾಗುವಂತೆ ಅನುಗ್ರಹಿಸುವನು.

ಈ ಅಪೂರ್ವ ಪ್ರಸಂಗದ ಉದ್ದಕ್ಕೂ ನಾವು ಅರ್ಜುನನ ಮನೋನಿಶ್ಚಯ ವನ್ನು ನೋಡುತ್ತೇವೆ. ಊರ್ವಶಿಯಂಥ ಚೆಲುವೆ ಬಂದು ಪ್ರಣಯಭಿಕ್ಷೆಯನ್ನು ಬೇಡುತ್ತಿರುವಾಗ ಯಾವ ಧೀರನ ಎದೆ ತಾನೆ ಜಗ್ಗದು! ಆದರೆ ಅರ್ಜುನನಿಗೆ ಅವಳು ತಾಯಂತೆ ಕಂಡಳು; ಅದೇ ಭಾವನೆಯನ್ನೇ ಅವನು ಕಡೆತನಕ ಸಾಧಿಸಿ ದನು. ಊರ್ವಶಿಯ ರೂಪಿಗೆ ಸೋಲಲಿಲ್ಲ, ಯುಕ್ತಿಗೆ ಸೋಲಲಿಲ್ಲ, ದೈನ್ಯಕ್ಕೆ ಸೋಲಲಿಲ್ಲ, ರೋಷಕ್ಕೆ ಸೋಲಲಿಲ್ಲ. ಪ್ರಲೋಭನಜಾಲ ಸುತ್ತಲೂ ಬೀಸಿ, ಸೋಲೇ ಸ್ವರ್ಗಸುಖವಾಗಿದ್ದ ಆ ಪ್ರಸಂಗದಲ್ಲಿ ಪಾರ್ಥನಿಗೆ ಮೋಹದ ಸೆರಗು ಕೂಡ ಸೋಕಲಿಲ್ಲವೆಂದರೆ, ಅವನ ವಿಜಯವು ಅದ್ವಿತೀಯವಾದದ್ದು. ಕವಿ ಇದನ್ನು ಚೆನ್ನಾಗಿ ಬಲ್ಲನು; ಈ ಸಂಧಿಯ ಮೊದಲಲ್ಲಿ ಬರುವ "ಸೂಚನೆ" ಯ ಮೂರು ಚರಣಗಳಲ್ಲಿ ಈ ಸನ್ನಿವೇಶದ ಸಾರವನ್ನೇ ಹೊರಗೆಡಹಿದ್ದಾನೆ:

ಭಯಭರಿತ ಭಕ್ತಿಯಲಿ ಕಾಮಾ
ರಿಯನು ಗೆಲಿದರ್ಜುನನು ಹರವೈ
ರಿಯನು ಗೆಲಿದನು ಧೈರ್ಯದಿಂದುರ್ವಶಿಯ ಶಾಪದಲಿ

ವಿಷಯಸೂಚಿಕೆಯಂತೆ ನೀರಸವಾಗಿರಬೇಕಾಗಿದ್ದ ಈ ಸೂಚನೆಯ ಪದ್ಯಾರ್ಥದಲ್ಲಿ ಎಷ್ಟೊಂದು ಭಾವವು ಎಷ್ಟೊಂದು ರಮ್ಯವಾಗಿ ಅಡಕವಾಗಿದೆ! ಇಂದ್ರಕೀಲದಲ್ಲಿ ಅರ್ಜುನನು ಭಕ್ತಿಯಿಂದ ಶಿವನನ್ನು ಜಯಿಸಿದ್ದು ಸಾಮಾನ್ಯವಲ್ಲ; ಆದರೆ ಊರ್ವಶಿಯ ಸಮ್ಮುಖದಲ್ಲಿ ಧೈರ್ಯದಿಂದ ಕಾಮನನ್ನು ಜಯಿಸಿದ್ದು ಅದಕ್ಕೂ ಮಿಗಿಲು. ಪಾಶುಪತಾಸ್ತ್ರದ ಲಾಭದಿಂದ ಅರ್ಜುನನ ತಲೆ ತಿರುಗಬಹುದಾಗಿತ್ತು; ಇಂದ್ರನಗರಿಯಲ್ಲಿ ನಹುಷನಂತೆ ಅವನು ಸೊಕ್ಕಬಹುದಾಗಿತ್ತು. ಆದರೆ ಹಾಗಾಗದೆ, ಅದರ ಬೆನ್ನ ಹಿಂದೆಯೇ ಊರ್ವಶೀಪ್ರಣಯದ ಸತ್ತ್ವಪರೀಕ್ಷೆಯನ್ನು ಅವನು ದಾಟಿದ್ದು ಹಿಂದಿನ ವಿಜಯಕ್ಕೆ ಇಮ್ಮಡಿಯ ಕಳೆಯನ್ನು ಕೊಡುತ್ತದೆ. ಆದ್ದರಿಂದಲೇ ನಾರಣಪ್ಪನು ಈ ಪ್ರಸಂಗದಲ್ಲಿ ಅರ್ಜುನ ಊರ್ವಶಿಯರ ಮನೋಭಾವಗಳನ್ನು ಬಿಡಿಸಿ ನಿರೂಪಿಸಿದನು. ಇಲ್ಲಿ ಊರ್ವಶಿಗೇನೋ ಅತಿ ದುಸ್ಸಹವಾದ ಅವಸ್ಥೆಯುಂಟಾಯಿತು: ತನ್ನ ಪ್ರಣಯ ಯಾಚನೆಗೆ ಧಿಕ್ಕಾರವಾಗುವುದಕ್ಕಿಂತ ಘೋರವಾದ ಅವಮಾನ ಹೆಣ್ಣಿಗಿಲ್ಲ. ಊರ್ವಶಿಗಾಗಿ ನಾವು ತುಂಬ ಮರುಗುತ್ತೇವೆ; ಅವಳ ಯಾತನೆಯನ್ನು ಆತ್ಮೀಯವಾಗಿ ಅನುಭವಿಸುತ್ತೇವೆ. ಆದರೆ ಊರ್ವಶಿಯ ಸೌಂದರ್ಯ ವೈಭವಕ್ಕೆ ಈ ಅನಾದರವೊದಗಬೇಕೆಂದೂ ಅವಳ ಪ್ರಣಯಭಂಗದಿಂದ ಅರ್ಜುನನ ಗೌರವ ಹೆಚ್ಚಬೇಕೆಂದೂ ನಾವು ನಿರೀಕ್ಷಿಸುತ್ತೇವೆ. ಈ ಸನ್ನಿವೇಶದ ಫಲ ವಿಷಮವಾಗಿ ಅರ್ಜುನನಿಗೆ ಶಾಪ ತಟ್ಟಿದರೂ ಚಿಂತೆಯಿಲ್ಲ. ಅವನ ಸತ್ತ್ವಪರೀಕ್ಷೆಯ ದೃಷ್ಟಿಯಿಂದ ಈ ನಪುಂಸಕತ್ವಲಾಭವು ಪಾಶುಪತಾಸ್ತ್ರಲಾಭಕ್ಕಿಂತಲೂ ಹೆಚ್ಚಿನದು.

ಕನ್ನಡ ಭಾರತದಲ್ಲಿ ಬಂದಿರುವ ಶೃಂಗಾರದ ಪರಿಮಿತ ಸನ್ನಿವೇಶಗಳಲ್ಲಿ "ವಿರಹಿಗಳ ಶೃಂಗಾರ" ವೇ ಹೆಚ್ಚಾಗಿದೆ. ಉಚಿತಜ್ಞನಾದ ಕವಿ ಒಂದೊಂದು ಕಡೆಯಲ್ಲಿ ಇದರ ಒಂದೊಂದು ಬಗೆಯನ್ನು ನಿರೂಪಿಸಿದ್ದಾನೆ. ಅವನು ಕೀಚಕನ ಮನೋನಿಗ್ರಹವರಿಯದ ಕಾಮಜ್ವರವನ್ನೂ ವರ್ಣಿಸಬಲ್ಲನು; ಜನ್ಮದೀರ್ಘವಾದ ಕಠಿನ ಬ್ರಹ್ಮಚರ್ಯವನ್ನು ಒಂದು ಕ್ಷಣಕಾಲದಲ್ಲಿ ಬೂದಿಮಾಡಿದ ಪಾಂಡುವಿನ ಚಿತ್ತಸ್ಖಲನೆಯನ್ನೂ ವರ್ಣಿಸಬಲ್ಲನು; ದೇವಗಣಿಕೆಯೇ ಬೇಡಿ ಬಂದರೂ ಚಲಿಸದ ಅರ್ಜುನನ ಸ್ಥೈರ್ಯವನ್ನೂ ವರ್ಣಿಸಬಲ್ಲನು. ಜೊತೆಗೆ, ಮಿಕ್ಕ ಪಾತ್ರಗಳ ಹೃದಯವನ್ನೂ ಹೇಗೆ ಹೊಕ್ಕು ಅವರ ನಡೆನುಡಿಗಳನ್ನು ಎಷ್ಟು ನಾಟಕೀಯವಾಗಿ ಚಿತ್ರಿಸಿದ್ದಾನೆ! ಪಶುವಿನಿಂದ ಸ್ಥಿರಪ್ರಜ್ಞನವರೆಗೆ ಕುಮಾರವ್ಯಾಸ

ಯೋಗೀಂದ್ರನು ಅರಿಯದ ಮನೋವೃತ್ತಿಯಿಲ್ಲ. ಅದರ ನಿರೂಪಣೆಯಾದರೂ ಎಷ್ಟು ಕಲಾಮಯವಾಗಿ ಬಂದಿದೆ: ಕೊನೆಯ ಫಲವನ್ನೇ ದೃಷ್ಟಿಯಲ್ಲಿಟ್ಟುಕೊಂಡು ಕಥೆಯನ್ನು ತೆರೆಯುವ ಕೌಶಲ, ಅಂಗೋಪಾಂಗಗಳನ್ನು ಎಲ್ಲೆ ಮೀರದಂತೆ ಬೆಳಸಿ ವಿಷಯಕ್ಕೆ ಅಳವಡಿಸಿಕೊಳ್ಳುವ ಔಚಿತ್ಯಜ್ಞಾನ, ದುರಂತ ಪರಿಣಾಮದಲ್ಲಿ ಕವಿತೆಯ ಶಿಖರವನ್ನು ಮುಟ್ಟುವ ಮರ್ಮಜ್ಞತೆ; ರಸವನ್ನು ಧಾರಾಕಾರವಾಗಿ ಹರಿಸುವ ಪ್ರತಿಭೆ—ಇವನ್ನು ಇಲ್ಲಿ ಎಷ್ಟು ಮೆಚ್ಚಿದರೂ ಸಾಲದು. ಇಲ್ಲಿ ಕಾಣಬಹುದಾದ ನ್ಯೂನತೆಯೆಂದರೆ—ಒಂದೊಂದು ಕಡೆ ಭಾವಕ್ಕೆ ನಯದ ಸಾಣೆ ಸಾಲದಿರುವುದು ಮಾತ್ರ.

ಭಾರತದಲ್ಲಿ ಶೃಂಗಾರವು ಒಟ್ಟಿನಮೇಲೆ ಅಮುಖ್ಯವಾದ ರಸ. ಅದನ್ನು ಆ ಮೆಟ್ಟಲಲ್ಲೇ ನಿಲ್ಲಿಸಿ, ನಿಲ್ಲಿಸಿದರೂ ನಿರೂಪಣೆಯನ್ನು ಲೋಕೋತ್ತರವಾಗಿ ನಿರ್ವಹಿಸುವ ಶಕ್ತಿ ಕುಮಾರವ್ಯಾಸನಂಥ ಮಹಾಕವಿಗೆ ಮಾತ್ರ ಸಾಧ್ಯ.

Table Fan is put off

This is the end of M.H.P's class in my life.

# ಮಹಾದೇವಿಯಕ್ಕನ ಕೆಲವು ವಚನಗಳು

"ಅಂದಂದಿನುಚಿತಕ್ಕೆ ಗೀತಮಂ ಪಾಡುತುಂ"
—ಹರಿಹರ: 'ಮಹಾದೇವಿಯಕ್ಕನ ರಗಳೆ,' vii. ೨೦೦

೧

ಕ್ರಿ.ಶ. ಹನ್ನೆರಡನೆಯ ಶತಮಾನದ ವೀರಶೈವ ತಾರಾಗಣದಲ್ಲಿ ಮಹಾದೇವಿ ಯಕ್ಕನ ಅಪೂರ್ವ ಕಾಂತಿ ಯಾರ ಕಣ್ಣನ್ನಾದರೂ ಸೆಳೆಯುತ್ತದೆ. ಬಸವಣ್ಣ ಅಲ್ಲಮಪ್ರಭುಗಳಂಥ ಪ್ರಥಮಶ್ರೇಣಿಯ ಜ್ಯೋತಿಗಳೊಡನೆ ಹೋಲಿಸಿದಾಗ ಕೂಡ ಆಕೆಯ ವರ್ಚಸ್ಸು ಕುಂದುವುದಿಲ್ಲ. ಎಳಹರೆಯದಲ್ಲೇ ಸಂಸಾರದ ತೊಡರನ್ನು ಹರಿದು, ಎಲ್ಲ ಬಗೆಯ ಅಭಿಮಾನವನ್ನೂ ತೊರೆದು, ಚೆನ್ನಮಲ್ಲಿ ಕಾರ್ಜುನದೇವನ ಹಂಬಲೊಂದನ್ನೇ ಹೃದಯದಲ್ಲಿ ತುಂಬಿಕೊಂಡು ಅವನನ್ನು ಆರಸುತ್ತಾ ಹೊರಟ ಈ ತೇಜಸ್ವಿನಿಯ ಏಕನಿಷ್ಠೆ ಹಿರಿಯ ಅನುಭಾವಿಗಳನ್ನೇ ಬೆರಗುಗೊಳಿಸಿತು. ಈ ಎಳೆಜವ್ವನದ ವಿರಕ್ತಿಯನ್ನು ಅವರು ಪರೀಕ್ಷಿಸಿ ಗೌರವಿ ಸಿದರು; ಹಿರಿಯ ತಿಳಿವನ್ನೂ ಅನುಭವವನ್ನೂ ಸೂಸುವ ಈ ಕಿರಿಯಳ ವಚನ ಗಳನ್ನು ಆಲಿಸಿ ಕೊಂಡಾಡಿದರು. ಅಂದು ವೀರಶೈವರ ಮನನಮಂತ್ರವಾಗಿ ಪರಿ ಣಮಿಸಿದ ಅವಳ ವಚನಗಳು ಇಂದು ಜಾತಿಮತಗಳ ಎಲ್ಲೆಯನ್ನು ದಾಟಿ ಎಲ್ಲ ಕನ್ನಡಿಗರ ಹೃದಯವನ್ನೂ ಸೂರೆಗೊಂಡಿವೆ. ಅವುಗಳ ಕಾವ್ಯಸಂಪತ್ತೂ ಅವು ಗಳಲ್ಲಿ ವ್ಯಕ್ತವಾಗುವ ಮಹಾದೇವಿಯ ಮೂರ್ತಿಸ್ವರೂಪವೂ ಕನ್ನಡ ಸಾಹಿತ್ಯಕ್ಕೆ ಭೂಷಣವಾಗಿ ನಿಂತಿವೆ.

ವೀರಶೈವ ಶರಣರ ವಚನಗಳನ್ನು ಒಟ್ಟಿನ ಮೇಲೆ ಎರಡು ರಾಶಿ ಯಾಗಿ ವಿಂಗಡಿಸಬಹುದು. ತಾವು ಕಂಡ ಅಥವಾ ತಿಳಿದ ತತ್ತ್ವವನ್ನು ಉಪದೇಶಿಸುವುದನ್ನೇ ಮುಖ್ಯೋದ್ದೇಶವಾಗಿಟ್ಟುಕೊಂಡು ಅದಕ್ಕೆ ಯಾವ ಬಗೆಯ ಸವಿಯನ್ನೂ ಕೂಡಿಸದೆ ರಚಿಸಿದ ವಚನಗಳು ಒಂದು ಗುಂಪಾಗುತ್ತವೆ. ಇವುಗಳಲ್ಲಿ ವಚನಕಾರರ ಗಮನವೆಲ್ಲಾ ಧರ್ಮದ ಕಡೆಗೆ, ಆಚಾರದ ಕಡೆಗೆ. ಅದು ಶ್ರೋತೃಗಳಿಗೆ ಗೊತ್ತಾದರೆ ಅವರ ಉದ್ದೇಶ ತೀರಿತು. ಮಾತು ಶುಷ್ಕ

ವಾದರೂ, ನಿರೂಪಣೆಯ ಕ್ರಮ ನೀರಸವಾದರೂ ಅವರಿಗೆ ಲಕ್ಷ್ಯವಿಲ್ಲ. ಇಂಥ ರಚನೆಗೆ "ವಚನಶಾಸ್ತ್ರ" ಎಂಬ ಹೆಸರು ಸರಿಯಾಗಿ ಒಪ್ಪುತ್ತದೆ. ಧರ್ಮದ ದೃಷ್ಟಿಯಿಂದ ಈ ವಚನಗಳಿಗೆ ಪ್ರಾಮುಖ್ಯವಿರುವುದೇನೋ ನಿಜ; ಆದರೆ ರಸಾಪೇಕ್ಷಿಗಳ ಹೃದಯವನ್ನು ಇವು ಆಕರ್ಷಿಸಲಾರವು.

ಎರಡನೆಯ ಗುಂಪಿನ ವಚನಗಳು ಸಂಖ್ಯೆಯಲ್ಲಿ ಅಷ್ಟೊಂದಿಲ್ಲ. ಆದರೆ ಸಾಹಿತಿಯ ದೃಷ್ಟಿಯಲ್ಲಿ ಅವುಗಳ ಬೆಲೆ ಬಲುಹಿರಿದು. ವಚನವಾಙ್ಮಯಕ್ಕೆ ಕನ್ನಡ ಸಾಹಿತ್ಯದಲ್ಲಿ ಶ್ರೇಷ್ಠಸ್ಥಾನವನ್ನು ಗಳಿಸಿಕೊಟ್ಟಿರತಕ್ಕವು ಇವು. ಇವುಗಳಲ್ಲೂ ತತ್ತ್ವವಿದೆ, ನೀತಿಯಿದೆ, ವೀರಶೈವಧರ್ಮದ ಸಾರವಿದೆ. ಆದರೆ ಇವು ಬುದ್ಧಿವ್ಯವಸಾಯದಿಂದ ಹೊರಬಿದ್ದ ವಚನಗಳಲ್ಲ. ಇವು ಹೊಮ್ಮಿರುವುದು ಹೃದಯದ ಆಳದಿಂದ, ಅನುಭವದ ಅರಳಾಗಿ. ಒಂದೊಂದು ವಚನವೂ ಸಾಧಕನು ಅನುಭವಿಸಿದ ಯಾವುದೋ ಒಂದು ನೋವಿನಿಂದ, ನಲವಿನಿಂದ, ಹಂಬಲಿನಿಂದ, ಹಾರೈಕೆಯಿಂದ ಜೀವಗೊಂಡು ಮಿಡಿಯುತ್ತಿರುತ್ತದೆ. ಭಕ್ತಿ, ಜ್ಞಾನ, ವೈರಾಗ್ಯ; ಯಾವುದೇ ಅದರ ವಿಷಯವಾಗಿರಲಿ, ವಚನಕಾರನ ಹೃದಯರಸದಲ್ಲಿ ಅದ್ದಿ ತೆಗೆದಿರುವುದರಿಂದ, ನಿಜವಾಗಿ ಅದೊಂದು ಬಿಡಿಕವನ– "ಮುಕ್ತಕ." ಶರಣನು ತನ್ನ ಜೀವನದ ಒಂದು ವಿಶಿಷ್ಟ ಘಟನೆಯಿಂದ, ವಿಶಿಷ್ಟ ಸನ್ನಿವೇಶದಿಂದ ಆವೇಶಗೊಂಡು ಹಾಡಿರತಕ್ಕ ವಚನಗಳೂ ಉಂಟು. ಇವುಗಳಲ್ಲೆಲ್ಲಾ ಅವನ ವ್ಯಕ್ತಿತ್ವದ ಮುದ್ರೆ ಒತ್ತಿಯೇ ಇರುತ್ತದೆ; ಅವನ ಜೀವನದ ಸಂಗತಿಗಳು ಅಲ್ಲಲ್ಲಿ ತಲೆಹಾಕಿರುವುದೂ ಅಸಂಭವವಲ್ಲ. ಸಾಹಿತಿ ಸವಿಯಲು ಬಯಸುವುದು ಇಂಥ ವಚನಾಮೃತವನ್ನು. ಬಸವಣ್ಣನ ವಚನಗಳ ಸ್ವಾರಸ್ಯವನ್ನು ಅರಿತವರಿಗೆ ಈ ವಿಷಯವನ್ನು ವಿಸ್ತಾರವಾಗಿ ಪ್ರತಿಪಾದಿಸಬೇಕಾಗಿಲ್ಲ.

ವಚನಕಾರರಲ್ಲಿ ಬಸವಣ್ಣನ ಗುಂಪಿಗೇ ಮಹಾದೇವಿಯಕ್ಕನು ಸೇರುತ್ತಾಳೆ. ತತ್ತ್ವಿಕಪ್ರಧಾನವಾದ ವಚನಗಳನ್ನು ಈಕೆ ರಚಿಸಿಲ್ಲವೆಂದಲ್ಲ; "ಚೆನ್ನಮಲ್ಲಿಕಾರ್ಜುನ" ಎಂಬ ಅಂಕಿತವನ್ನೊಳಕೊಂಡು ದೊರೆಯುವ ವಚನಗಳಲ್ಲಿ ಈ ವರ್ಗಕ್ಕೆ ಸೇರತಕ್ಕವೂ ಉಂಟು. ಆದರೆ ಅವಳ ವಚನಗಳ ಬಹುಭಾಗ ನಿಜವಾಗಿಯೂ ರಸಾದ್ರ್ರವಾದದ್ದು; ಉಪಮಾನಗಳಿಂದ, ಚಿತ್ರಕಲ್ಪನೆಗಳಿಂದ ಮನೋಹರವಾಗಿರತಕ್ಕದ್ದು; ಅವಳದು ಕವಿಯ ಹೃದಯ, ಕವಿಯ ಕಣ್ಣು.

ಎಂಬುದನ್ನು ಸಾರತಕ್ಕದ್ದು. ಇದರ ಸೊಗಸನ್ನು ಕಂಡವರಿಗೆ ಇಂಥ ಇನ್ನಷ್ಟನ್ನು ಓದಬೇಕೆಂಬ ಆಶೆ ಅತಿಶಯವಾಗಿ ಹುಟ್ಟುತ್ತದೆ.

ಆದರೆ ಮಹಾದೇವಿಯಕ್ಕನ ವಚನಗಳನ್ನೆಲ್ಲಾ ಒಟ್ಟುಗೂಡಿಸಿದ ಪುರಾತನ ಸಂಕಲನ ಯಾವುದೂ ಇದುವರೆಗೆ ದೊರೆತಿಲ್ಲ. ರಾವ್‌ಬಹದ್ದೂರ್ ಶ್ರೀವರ್ಮಾ ಪಿ. ಜಿ. ಹಳಕಟ್ಟಿಯವರು "೧೨ ವಚನಸಂಗ್ರಹಗಳೊಳಗಿನ ವಚನಗಳನ್ನು ಬೇರೆ ತೆಗೆದು" ಒಂದು ಕ್ರಮದಲ್ಲಿ ಜೋಡಿಸಿ 'ಮಹಾದೇವಿಯಕ್ಕನ ವಚನಗಳು' ಎಂಬ ಹೆಸರಿನಿಂದ ಪ್ರಸಿದ್ಧಪಡಿಸಿದ್ದಾರೆ. ಮೊದಲನೆಯ ಆವೃತ್ತಿ ಅಚ್ಚಾದದ್ದು ೧೯೨೭ ರಲ್ಲಿ. ಅಲ್ಲಿಂದೀಚೆಗೆ ಯಾವ ವ್ಯತ್ಯಾಸಗಳೂ ಇಲ್ಲದೆ ಅದೇ ಪುನರ್ಮುದ್ರಿತವಾಗುತ್ತಿದೆ. ಶ್ರೀವರ್ಮಾ ಹಳಕಟ್ಟಿಯವರು ಹೆಚ್ಚಿನ ವಚನಗಳೇನನ್ನೂ ಅದಕ್ಕೆ ಸೇರಿಸಿಲ್ಲ.[1] ಹೀಗೆ ಅವರು ಒಂದು ಘಟ್ಟಕ್ಕೆ ತಂದು ನಿಲ್ಲಿಸಿರುವ ಕಾರ್ಯವನ್ನು ಇನ್ನೊಂದು ಹೆಜ್ಜೆ ಮುಂದುವರಿಸುವುದೇ ನಮ್ಮ ಲೇಖನದ ಮುಖ್ಯೋದ್ದೇಶ. ಇದು ಅವರ ಸಂಗ್ರಹಕ್ಕೆ ಒಂದು ಬಗೆಯ ಪರಿಶಿಷ್ಟದಂತೆ, ಪರಿಷ್ಕಾರದಂತೆ ಇದೆಯೆಂದು ಬೇಕಾದರೂ ಹೇಳಬಹುದು.

ಮೊದಲಲ್ಲೇ ಒಂದು ಅರಿಕೆ. ಶ್ರೀವರ್ಮಾ ಹಳಕಟ್ಟಿಯವರ ಕಣ್ಣಿಗೆ ತಪ್ಪಿಸಿಕೊಂಡಿರುವ ಮಹಾದೇವಿಯಕ್ಕನ ಎಲ್ಲ ವಚನಗಳನ್ನೂ ಇಲ್ಲಿ ಸಂಗ್ರಹಿಸಿಕೊಡಲು ನಾವು ಹೊರಟಿಲ್ಲ. ಅಷ್ಟು ದೊಡ್ಡ ಕಾರ್ಯಕ್ಕೆ ಇಲ್ಲಿ ಸ್ಥಳ ಸಾಲದು, ನಮ್ಮ ಶೋಧನೆಯೂ ಸಾಲದು. ಇದರಮೇಲೆ ಅದು ನಮ್ಮ ಉದ್ದೇಶವೂ ಅಲ್ಲ. ತತ್ತ್ವಪ್ರಾಧಾನ್ಯದ ವಚನಗಳಿಗಿಂತ ಕಾವ್ಯಗುಣವುಳ್ಳ ವಚನಗಳ ಕಡೆಗೆ, ಅದರಲ್ಲೂ ಮಹಾದೇವಿಯಕ್ಕನ ವ್ಯಕ್ತಿ ಜೀವನದ ಮೇಲೆ ಬೆಳಕು ಬೀರಬಹುದಾದ ವಚನಗಳ ಕಡೆಗೆ, ಇಲ್ಲಿ ನಮ್ಮ ಮುಖ್ಯಗಮನ. ಕೇವಲ ತತ್ತ್ವದ ವಚನಗಳನ್ನು ಮತಾಭಿಮಾನಿಗಳಾದ ಹಿಂದಿನ ಸಂಗ್ರಹಕಾರರು ಒಂದಲ್ಲ ಒಂದು ಕಡೆ ಉಳಿಸಿಕೊಟ್ಟೇ ಇದ್ದಾರೆ; ಒಂದಲ್ಲ ಒಂದು ದಿನ ಅವೆಲ್ಲವೂ ಪ್ರಕಟವಾಗಿಯೇ ಆಗುತ್ತವೆ. ಮತದೃಷ್ಟಿಯಿಂದ ಅಷ್ಟು ಮುಖ್ಯವೆಂದು ತೋರದ ಆಕೆಯ ಆತ್ಮೀಯ ವಚನಗಳಲ್ಲಿ ಹಲವು ಕಾಲಪುರುಷನ ಬಾಯಿಗೆ ತುತ್ತಾಗಿರುವಂತೆ ಕಾಣುತ್ತದೆ. ಆದರೆ ನಮ್ಮ ಸುದೈವದಿಂದ ಎಲ್ಲವೂ ಹಾಗೆ ನಷ್ಟವಾಗಿಲ್ಲ. ಕೆಲವು ಅಲ್ಲಲ್ಲೇ ಉಳಿದಿವೆ; ಮತ್ತೆ

[1] ಈ ಲೇಖನಕ್ಕಾಗಿ ಉಪಯೋಗಿಸಿಕೊಂಡಿರುವ ಪ್ರತಿ ಮೂರನೆಯ ಆವೃತ್ತಿಯದು (೧೯೩೪)....ಈ ಲೇಖನದ ಪರಿಶಿಷ್ಟವನ್ನು ನೋಡಿ.

ಕೆಲವು ತಮ್ಮ ಪದಚಿಹ್ನೆಯನ್ನು ನಿಲ್ಲಿಸಿವೆ. ನಮ್ಮ ಕಣ್ಣಿಗೆ ಬಿದ್ದ ಇವುಗಳ ಆಕರಗಳನ್ನು ಸೂಚಿಸಿ, ಅಲ್ಲಿಂದ ಗಮನಾರ್ಹವಾದ ಕೆಲವು ವಚನಗಳನ್ನು ಉದ್ಧರಿಸಿಕೊಟ್ಟು ಒಂದೆರಡು ಮಾತನ್ನು ಹೇಳುವುದೇ ಈ ಲೇಖನದ ಗುರಿ.

೨

ಮಿಕ್ಕ ಆಕರಗಳ ಕಡೆಗೆ ತಿರುಗುವ ಮೊದಲು, ಶ್ರೀಮಾನ್ ಹಳಕಟ್ಟಿಯವರಿಗೆ ಬಹುಶಃ ದೊರೆಯದಿದ್ದ ಎರಡು ವಚನಸಂಕಲನಗಳಿಂದ ಎರಡು ವಚನಗಳನ್ನು ಒಂದೊಂದರಿಂದ ಒಂದೊಂದರಂತೆ ಇಲ್ಲಿ ಉದ್ಧರಿಸಿಕೊಡುತ್ತೇವೆ. ಇವೆರಡರಲ್ಲೂ ಮಹಾದೇವಿಯಕ್ಕನ ಭಕ್ತಿನಿಷ್ಠೆಯೂ ಕವಿವಾಣಿಯೂ ಗೋಚರಿಸುತ್ತವೆ:

ಬೋಳೆಯನೆಂದು ನಂಬಬೇಡ, ಡಾಳಕನವನು, ಜಗದ ಬಿನ್ನಾಣಿ. ಬಾಣ ಮಯೂರ ಕಾಳಿದಾಸ ವೋಹಿಲನುದ್ಭಟ ಮಲುಹಣನವರಿಗಿತ್ತ ಪರಿ ಬೇಱೆ. ಮುಕ್ತಿ ಭುಕ್ತಿಯ ತೋಱಿ ಭಕ್ತಿಯ ಮಱಸಿಕೊಂಬನು ಚೆನ್ನಮಲ್ಲಿಕಾರ್ಜುನನು.[2]

ಕೋಲ ತುದಿಯ ಕೋಡಗದಂತೆ ನೇಣತುದಿಯ ಬೊಂಬೆಯಂತೆ ಆಡಿದೆನಯ್ಯಾ ನೀನಾಡಿಸಿದಂತೆ. ಆ ನುಡಿದನಯ್ಯಾ ನೀನು ನುಡಿಸಿದಂತೆ. ಆನು ಇದ್ದೆನಯ್ಯಾ ನೀನು ಇರಿಸಿದಂತೆ. ಜಗದ ಯಂತ್ರವಾಹಕ ಚೆನ್ನಮಲ್ಲಿಕಾರ್ಜುನ ಸಾಕೆಂಬ[ನ್ನ]ಕ್ಕ.[3]

೩

ಚಾಮರಸನ 'ಪ್ರಭುಲಿಂಗಲೀಲೆ' ಅಲ್ಲಮಪ್ರಭುವೊಬ್ಬನ ಚರಿತ್ರೆಯಲ್ಲ; ಅದೊಂದು ಭಕ್ತಕಥಾವಳಿ. ಅದು ಷಟ್ಪದೀಕಾವ್ಯವಷ್ಟೇ ಅಲ್ಲ; ಒಂದು ವಚನ

---

[2] ಇದು ಮೈಸೂರು ಓರಿಯೆಂಟಲ್ ಲೈಬ್ರರಿಯಲ್ಲಿ 'ವಚನಸಂಗ್ರಹ' ಎಂಬ ಹೆಸರಿನಲ್ಲಿ ದೊರೆಯುವ ಓಲೆಗರಿಯ ಪ್ರತಿ (K 499)ಯಿಂದ ತೆಗೆದದ್ದು. ಈ ಸಂಗ್ರಹದಲ್ಲಿ ಸುಮಾರು ೮೦ಕ್ಕೆ ಹೆಚ್ಚಿನ ವಚನಕಾರರ ವಚನಗಳು, ಮುಖ್ಯವಾಗಿ ತತ್ತ್ವಕ್ಕೆ ಸಂಬಂಧಪಟ್ಟವು ದೊರೆಯುತ್ತವೆ. ಇಲ್ಲಿರುವ ಮಹಾದೇವಿಯಕ್ಕನ ವಚನಗಳು ೪ ಮಾತ್ರ; ಅವುಗಳಲ್ಲಿ ಎರಡು ಆಗಲೇ ಹಳಕಟ್ಟಿಯವರ ಸಂಕಲನದಲ್ಲಿ ಸೇರಿರತಕ್ಕವು.

[3] ಇದು ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರ ವಶದಲ್ಲಿರುವ 'ವಚನಸಾರ' ಎಂಬ ಓಲೆಯ ಪ್ರತಿಯಿಂದ ತೆಗೆದದ್ದು. (ಇದರ ಕಾಲ ಕ್ರಿ. ಶ. ೧೬೬೧.) ಇಲ್ಲಿಯೂ ಬೇರೆ ಬೇರೆ ವಚನಕಾರರ ವಚನಗಳುಂಟು. ಇಲ್ಲಿ ಬಂದಿರುವ ಮಹಾದೇವಿ

ಕೋಶವೂ ಹೌದು. ತನ್ನ ಕಥೆಯ ನೆಯ್ಗೆಯಲ್ಲಿ ಚಾಮರಸನು ಶರಣರ ವಚನಗಳ ಸರಿಗೆಯೆಳೆಯನ್ನು ಸೇರಿಸಿಕೊಂಡಿರುವುದು ಮಾತ್ರವಲ್ಲದೆ, ಪ್ರಭುಲಿಂಗಲೀಲೆಯ ಪ್ರತಿಯೊಂದು ಗತಿಯ ಪ್ರಾರಂಭದಲ್ಲೂ ಅಲ್ಲಲ್ಲಿಗೆ ಅನುರೂಪವಾದ ವಚನಗಳನ್ನೂ ಮೊದಲು ಉದಾಹರಿಸಿ ಬಳಿಕ ಪದ್ಯರಚನೆಗೆ ತೊಡಗಿದ್ದಾನೆ. ಇದು ಚಾಮರಸನ ಕೈವಾಡವೇ ಎನ್ನುವುದಕ್ಕೆ ಈ ಬಗೆಯ ವಚನಗಳ ಅವತರಣಿಕೆ ಪ್ರಭುಲಿಂಗಲೀಲೆಯ ಎಲ್ಲ ಮಾತೃಕೆಗಳಲ್ಲೂ ತಪ್ಪದೆ ಕಾಣಬರುವುದು ದೊಡ್ಡ ಸಾಕ್ಷಿ. "ಈ ಎಲ್ಲ ಪ್ರತಿಗಳಲ್ಲಿ ಪ್ರತಿಯೊಂದು ಗತಿಯ ಆರಂಭದಲ್ಲಿ ಅವತರಿಸಿದ ವಚನಗಳು ಒಂದೇ ಸವನಾಗಿಲ್ಲ"[4] ಎಂಬುದೇನೋ ನಿಜ. ಹಾಗೆಂದು ಉಪೇಕ್ಷಿಸದೆ, ವಚನಗಳ ಸಂಕಲನ ಪಾಠಶೋಧನೆಗಳ ದೃಷ್ಟಿಯಿಂದಲೇ ಪ್ರಭುಲಿಂಗಲೀಲೆಯ ಎಲ್ಲ ಮಾತೃಕೆಗಳನ್ನೂ ಪರಿಶೀಲಿಸುವುದು ಅಗತ್ಯ.

ಮಹಾದೇವಿಯಕ್ಕನ ಕಥೆ ಪ್ರಭುಲಿಂಗಲೀಲೆಯ ೧೦ನೆಯ ಮತ್ತು ೧೭ನೆಯ ಗತಿಗಳಲ್ಲಿ ಮುಖ್ಯವಾಗಿ ನಿರೂಪಿತವಾಗಿದೆ. ಇವೆರಡರ ಆದಿಯಲ್ಲೂ ಅವಳ ವಚನಗಳು ಬಂದಿವೆ. ಅಚ್ಚಿನ ಪ್ರತಿಯಲ್ಲೂ ಅಷ್ಟೇ, ನಾವು ಹೋಲಿಸಿ ನೋಡಿದ ಮಾತೃಕೆಗಳಲ್ಲೂ ಅಷ್ಟೇ,[5] ೧೦ನೆಯ ಗತಿಯ ಮೊದಲಲ್ಲಿ ಬರುವ ವಚನಗಳ

---

ಯಕ್ಕನ ವಚನಗಳು ಸುಮಾರು ೨೫-೩೦ ಆಗಬಹುದು; ಇವೆಲ್ಲ ಒತ್ತಟ್ಟಿಗೆ ಇಲ್ಲ. (ಈ ವಚನಗಳಲ್ಲಿ ಹಲವು ಹಳಕಟ್ಟಿಯವರ ಸಂಕಲನದಲ್ಲಿ ಬಂದಿವೆ.)

'ವಚನ ಸಾರ'ದ ಪ್ರತಿಯನ್ನೂ ಗುಮ್ಮಳಾಪುರದ ಸಿದ್ಧಲಿಂಗಯತಿಯ 'ಶೂನ್ಯಸಂಪಾದನೆ'ಯ ಪ್ರತಿಯನ್ನೂ' ಉಪಯೋಗಿಸಿಕೊಳ್ಳಲು ನನಗೆ ಅವಕಾಶಕೊಟ್ಟಿದ್ದಕ್ಕಾಗಿಯೂ, ಉಪಯುಕ್ತವಾದ ಕೆಲವು ಸೂಚನೆಗಳನ್ನು ಕೊಟ್ಟಿದ್ದಕ್ಕಾಗಿಯೂ ಶ್ರೀಮಾರ್ಣ ನರಸಿಂಹಾಚಾರ್ಯರಿಗೆ ನನ್ನ ಕೃತಜ್ಞತೆಯನ್ನು ಸಂತೋಷದಿಂದ ಸಲ್ಲಿಸುತ್ತೇನೆ.

[4] ಧಾರವಾಡದ ಲಿಂಗಾಯಿತ ವಿದ್ಯಾಭಿವೃದ್ಧಿ ಸಂಸ್ಥೆಯ ವಾಙ್ಮಯ ಶಾಖೆಯ ಸಂಸ್ಕರಣ, ಮುನ್ನುಡಿ, ಪು.-೩-. "ಇವೆಲ್ಲ ವಚನಗಳಲ್ಲಿ ಯೋಗ್ಯ ಕಂಡವುಗಳನ್ನು ಮಾತ್ರ ಆರಿಸಿ ಆ ಆ ಗತಿಗಳ ಆರಂಭದಲ್ಲಿ ಕೊಟ್ಟಿದೆ" ಎಂದು ಮುನ್ನುಡಿಯ ಲೇಖಕರು ಹೇಳಿದ್ದಾರೆ.

[5] ಮೈಸೂರು ಓರಿಯೆಂಟಲ್ ಲೈಬ್ರರಿಯ ಪ್ರತಿಗಳು: K 154, K 180, K 328, K 356, K A 170. K 180ರಲ್ಲಿ 'ಪ್ರಭುಲಿಂಗಲೀಲೆ'ಯೊಂದೇ ಅಲ್ಲ, ಬೇರೆಯ ಗ್ರಂಥಗಳೂ ಇವೆ. ಇದಕ್ಕೆ ಲೈಬ್ರರಿಯವರು ಸೇರಿಸಿರುವ ವಿಷಯ

ಸಂಖ್ಯೆ ಆನುಪೂರ್ವಿಗಳು ಒಂದೇ ಆಗಿವೆ. ಆ ನಾಲ್ಕು ವಚನಗಳನ್ನೂ ಕೆಳಗೆ ಕೊಟ್ಟಿದ್ದೇವೆ. ಇವುಗಳಲ್ಲಿ ಒಂದು ಮಾತ್ರ ('ಕಾಯ ಕಱ್ರನೆ....') ಹಳಕಟ್ಟಿಯವರ ಸಂಕಲನದಲ್ಲಿ ಸ್ವಲ್ಪ ಪಾಠಭೇದದೊಡನೆ ಸಿಕ್ಕುತ್ತದೆ (ಪು. ೩೦-ವ. ೮).—

ಮುಡಿ ಬಿಟ್ಟು, ಮೊಗ ಬಾಡಿ ತನು ಕರಗಿದವಳ ಎನ್ನನೇಕೆ ನುಡಿಸುವಿರಿ ಎಲೆ ಅಣ್ಣಗಳಿರಾ, ಎನ್ನನೇಕೆ ಕಾಡುವಿರಿ ಎಲೆ ತಂದೆಗಳಿರಾ, ಬಲುಹಳಿದು ಭವಗೆಟ್ಟು, ಛಲವಳಿದು ಭಕ್ತೆಯಾಗಿ ಚೆನ್ನಮಲ್ಲಿಕಾರ್ಜುನನ ಕೂಡಿ ಕುಲವಳಿದವಳ?

ಎರದ ಮುಳ್ಳಿನಂತೆ ಪರಗಂಡರೆನಗವ್ವಾ. ಸೋಂಕಲಮ್ಮೆ ಸುಳಿಯಲಮ್ಮೆ ನಂಬಿ ನಚ್ಚಿ ಮಾತಾಡಲಮ್ಮೆನವ್ವಾ, ಚೆನ್ನಮಲ್ಲಿಕಾರ್ಜುನನಲ್ಲದ ಗಂಡರ ಉರವಲಿ ಮುಳ್ಳುಂಟೆಂದು ನಾನಪ್ಪಲಮ್ಮೆನವ್ವಾ.

ಕಾಯ ಕಱ್ರನೆ ಕಂದಿದರೇನಯ್ಯಾ, ಕಾಯ ಮಿಱ್ರನೆ ಮಿಂಚಿದರೇನಯ್ಯಾ? ಅಂತರಂಗ ಶುದ್ಧವಾದ ಬಳಿಕ್ಕ ಕಾಯವೇನಾದಡೇನಯ್ಯಾ? ಚೆನ್ನಮಲ್ಲಿಕಾರ್ಜುನಂ ಗೊಲಿದ ಕಾಯವೇನಾದಡೆ ನಿಮಗೇನಯ್ಯಾ?

ಎರೆಯಂತೆ ಕರಕರಗಿ ಮಳಲಂತೆ ಜರಿಜರಿದು ಕನಸಿನಲಿ ಕಳವಳಿಸಿ ಆನು ಬೆಱಗಾದೆ, ಆವಗೆಯ ಕಿಚ್ಚಿನಂತೆ ಸುಳಿಸುಳಿದು ಬೆಂದೆ. ಆಪತ್ತಿಗೆ ಸಖಿಯರ ನಾನಾ ರುವನು ಕಾಣೆ. ಅಱಿಸಿ ಕಾಣದ ತನುವ ಬೆರಸಿ ಕೂಡದ ಸುಖವ ಎನಗೆ ನೀ ಕರುಣಿಸು ಚೆನ್ನಮಲ್ಲಿಕಾರ್ಜುನಾ.[6]

ಈ ನಾಲ್ಕು ವಚನಗಳೂ ಮಹಾದೇವಿಯಕ್ಕನ ಹೃದಯದ ಕುದಿಯಿಂದಲೇ ಉಕ್ಕಿರಬೇಕೆಂಬುದರಲ್ಲಿ ಯಾವ ಸಂದೇಹವೂ ಕಾಣಿಸದು. ಕೇಶಾಂಬರೆಯಾಗಿ

---

ಸೂಚಿಕೆಯ ಕೊನೆಯಲ್ಲಿ 'ಅಕ್ಕಗಳ ವಚನ' ಎಂದಿದೆ; ಆದರೆ ಗ್ರಂಥದಲ್ಲಿ ಇದಕ್ಕೆ ಸಂವಾದಿಯಾಗಿರುವುದು 'ಮಹಾದೇವಿಯಕ್ಕನ ವಚನ'ಗಳಲ್ಲ; ಯಾವುವೋ ತತ್ತ್ವದ ಪದಗಳು.

[6] ಈ ಲೇಖನದಲ್ಲಿ ಉದಾಹರಿಸಿರುವ ವಚನಗಳು ಎರಡು ಮೂರು ಕಡೆ ದೊರೆತಿದ್ದರೆ, ಭಿನ್ನಪಾಠಗಳನ್ನೆಲ್ಲಾ ಗುರುತಿಸುವ ಗೋಜಿಗೆ ಹೋಗಿಲ್ಲ. ಅತಿ ಮುಖ್ಯವಾದ ಪಾಠಭೇದವೇನಾದರೂ ಇದ್ದರೆ, ಅದನ್ನು ಮಾತ್ರ ಸೂಚಿಸಲಾಗಿದೆ. 'ಱ'ಕಾರವನ್ನು ಮಾತೃಕೆಗಳಲ್ಲಿ ನಿಯತವಾಗಿ ಪ್ರಯೋಗಿಸಿಲ್ಲದಿದ್ದರೂ, ಈ ಲೇಖನದೊಳಗೆ ಉದ್ಧರಿಸಿರುವ ಭಾಗಗಳಲ್ಲಿ ಕ್ಲುಪ್ತವಾಗಿ ತೋರಿಸಿದೆ.

ಹೊರಟ ಈ ಸುಂದರಿಯನ್ನು ಯಾರು ಯಾರು ಕೋಟಲೆಗೊಳಿಸಿದರೋ! ಯಾವ ಯಾವ ಸಂದರ್ಭಗಳಲ್ಲಿ ಈ ಆರ್ತಧ್ವನಿಗಳು ಹೊರಟುವೋ!

೧೭ನೆಯ ಗತಿಯ ಮೊದಲಲ್ಲಿ ಬರುವ ವಚನಗಳನ್ನು ಕುರಿತು ಈ ಬಗೆಯ ಐಕಮತ್ಯವಿಲ್ಲ. ನಾವು ಶೋಧಿಸಿದ ಐದು ಮಾತೃಕೆಗಳಲ್ಲೂ "ಚೆನ್ನಮಲ್ಲಿಕಾರ್ಜುನ" ಎಂಬ ಅಂಕಿತವುಳ್ಳ ಒಂದೇ ಒಂದು ವಚನ ದೊರೆಯುತ್ತದೆ; ಹಳಕಟ್ಟಿಯವರ ಸಂಕಲನದಲ್ಲಿ ಇದಕ್ಕಾಗಲೇ ಸ್ಥಾನ ಸಿಕ್ಕಿದೆ (ಪು. ೪೨-ಸಂ. ೧೨). ಪ್ರಭುಲಿಂಗಲೀಲೆಯ ಧಾರವಾಡದ ಮುದ್ರಣದಲ್ಲಿ ಮಹಾದೇವಿಯಕ್ಕನ ಇನ್ನೂ ಎಂಟು ವಚನಗಳು ಹೆಚ್ಚಾಗಿ ಉಂಟು. ಇವುಗಳಲ್ಲಿ ಮೂರು ಮಾತ್ರ ಹಳಕಟ್ಟಿಯವರ ಸಂಕಲನದಲ್ಲಿ ಕಾಣಿಸಿಕೊಳ್ಳುತ್ತವೆ.[7] ಮಿಕ್ಕವುಗಳಲ್ಲಿ[8] ಒಂದನ್ನು ಇಲ್ಲಿ ಎತ್ತಿಕೊಡುತ್ತೇವೆ. ಶಿವಸಾಕ್ಷಾತ್ಕಾರಕ್ಕಾಗಿ ಮಹಾದೇವಿಯಕ್ಕನು ಹಂಬಲಿಸಿ ತೊಳಲುತ್ತಿದ್ದುದು ಇಲ್ಲಿ ರಮ್ಯವಾಗಿ ವ್ಯಕ್ತವಾಗುತ್ತದೆ:

ಗಿರಿಯೊಳು ವನದೊಳು ಗಿಡಗಿಡದತ್ತ ದೇವ ಎನ್ನ ದೇವ, ಬಾರಯ್ಯಾ ತೋಱಯ್ಯಾ ನಿಮ್ಮ ಕರುಣವನೆಂದು ನಾನು ಅಱಸುತ್ತ ಅಳಲುತ್ತ ಕಾಣದೆ ಸುಯಿದು ಬಂದು ಕಂಡೆ ಶರಣರ ಸಂಗದಿಂದ ಅರಸಿ ಹಿಡಿದೇನೆಂದು ನೀನಡಗುವ ಠಾವ ಹೇಳಾ ಚೆನ್ನಮಲ್ಲಿಕಾರ್ಜುನಾ.

---

[7] ಪು. ೧೭-ಸಂ. ೭, ಪು. ೯-ಸಂ. ೮, ಪು. ೧೭-ಸಂ. ೪. ಇವಲ್ಲದೆ, 'ಸಾವಿಲ್ಲದ ಸಹಜಂಗೆ....' ಎಂದು ಪ್ರಭುಲಿಂಗಲೀಲೆಯ ಈ ಪ್ರತಿಯಲ್ಲಿ ಬಂದಿರುವ ವಚನವೂ, ಹಳಕಟ್ಟಿಯವರ ಸಂಕಲನದಲ್ಲಿರುವ 'ಸಾವಿಲ್ಲದ, ಕೇಡಿಲ್ಲದ....' ಎಂಬ ವಚನವೂ (ಪು. ೨೦-ಸಂ. ೭) ಮೂಲತಃ ಒಂದೇ ಆಗಿರಬೇಕೆಂದು ತೋರುತ್ತದೆ. ಆದರೆ ಪಾಠಭೇದ ಅತಿಶಯವಾಗಿ ಉಂಟು. ಈ ವಚನದ ಇನ್ನೊಂದು ರೂಪ ಶೂನ್ಯಸಂಪಾದನೆಯಲ್ಲಿ ದೊರೆಯುತ್ತದೆ. (ಹಳಕಟ್ಟಿಯವರ ಮುದ್ರಣ, ಪು. ೨೮೨-ಸಂ. ೨೩).

[8] ಇವುಗಳಲ್ಲಿ ಎರಡು ವಚನಗಳು ಶ್ರೀಮಾನ್ ಹಳಕಟ್ಟಿಯವರೇ ಅಚ್ಚು ಮಾಡಿಸಿರುವ ಶೂನ್ಯಸಂಪಾದನೆಯಲ್ಲಿ ದೊರೆಯುತ್ತವೆ (ಪು. ೨೭೮-ಸಂ. ೯, ಪು. ೨೭೯-ಸಂ. ೭). ಅವರ 'ಮಹಾದೇವಿಯಕ್ಕನ ವಚನಗಳ'ಲ್ಲಿ ಏಕೆ ಕೈ ಬಿಟ್ಟು ಹೋದುವೋ.

೪

'ಶೂನ್ಯಸಂಪಾದನೆ'ಯನ್ನು ಒಂದು ರೀತಿಯಲ್ಲಿ ಪ್ರಭುಲಿಂಗಲೀಲೆಯ ಗದ್ಯಾವತಾರವೆನ್ನಬಹುದು. ಈ ಬಗೆಯಾಗಿ ಶಿವಶರಣರ ವಚನಗಳನ್ನು ಕೂಡಿಸಿ ಜೋಡಿಸಿ "ಕಥಾಸಾಂಗತ್ಯ"ವನ್ನು ರಚಿಸಿದವರಿಗೆ ಪ್ರಭುಲಿಂಗಲೀಲೆಯಿಂದಲೇ ಪ್ರೇರಣೆ ಒದಗಿರಬೇಕೆಂಬುದು ಸ್ಪಷ್ಟ. ಮೊದಲು ಶಿವಗಣಪ್ರಸಾದಿ ಮಹಾದೇವಯ್ಯನು ಸಂಗ್ರಹಿಸಿದ ಈ ಕೃತಿ ಬೇರೆ ಬೇರೆ ಪರಿಷ್ಕರಣಗಳಿಗೆ ಹೇಗೆ ಒಳಗಾಯಿತೆಂಬ ವಿಷಯವನ್ನು ಶ್ರೀಮಾನ್ ಎಂ. ಆರ್. ಶ್ರೀನಿವಾಸಮೂರ್ತಿಗಳು ಸಪ್ರಮಾಣವಾಗಿ ಪ್ರತಿಪಾದಿಸಿದ್ದಾರೆ.[9] ಅವರು ಸೂಚಿಸಿರುವಂತೆ, ಈ ಭಿನ್ನ ಭಿನ್ನ ರೂಪಗಳನ್ನು ಶೂನ್ಯಸಂಪಾದನೆ ತಾಳಿದ್ದಕ್ಕೆ ಸಿದ್ಧರಾಮನ ದೀಕ್ಷೆಯ ಪ್ರಸಂಗವೇ ಮುಖ್ಯಕಾರಣವಾಗಿರಬಹುದು ; ಆದರೆ ಇಷ್ಟಕ್ಕೇ ಇವುಗಳ ವ್ಯತ್ಯಾಸ ಮುಗಿಯುವುದಿಲ್ಲ. ಮಹಾದೇವಿಯಕ್ಕನ ವೃತ್ತಾಂತವನ್ನು ನಿರೂಪಿಸುವಾಗ ಕೂಡ, ವಿಷಯದಲ್ಲೂ ವಚನಸಂಖ್ಯೆಯಲ್ಲೂ ಈ ಪ್ರತಿಗಳಲ್ಲಿ ಒಂದಕ್ಕೊಂದಕ್ಕೆ ಭೇದ ಬೇಕಾದಷ್ಟಿದೆ. ಇವುಗಳಲ್ಲೆಲ್ಲಾ, ಮಹಾದೇವಿಯಕ್ಕನನ್ನು ಕುರಿತ ಭಾಗ ಹೆಚ್ಚು ವಿಸ್ತಾರದೊಡನೆ ಬಂದಿರುವುದು ಹಲಗೆಯ ದೇವರ ಶೂನ್ಯಸಂಪಾದನೆಯಲ್ಲಿ.[10] ಕಥೆಯ ಆದಿಭಾಗದಲ್ಲೇ ಈ ವ್ಯತ್ಯಾಸ ಸ್ಪಷ್ಟವಾಗುತ್ತದೆ. ಮಿಕ್ಕ ಪ್ರತಿಗಳಲ್ಲಿ,

---

[9] 'ಪ್ರಬುದ್ಧ ಕರ್ಣಾಟಕ', ಸಂ. ೧೫-ಸಂ. ೪ : 'ಶೂನ್ಯಸಂಪಾದನೆಗಳು.'

[10] ಶ್ರೀಮಾನ್ ಶ್ರೀನಿವಾಸಮೂರ್ತಿಗಳು ಶೂನ್ಯಸಂಪಾದನೆಯ ಐದು ಪಾಠಗಳುಂಟೆಂದು ಲೆಕ್ಕಮಾಡಿದ್ದಾರೆ: (೧) ಶಿವಗಣಪ್ರಸಾದಿ ಮಹಾದೇವಯ್ಯನದು. ಬಹುಶಃ ಇದರದೇ ಒಂದು ಓಲೆಯ ಪ್ರತಿ ನನ್ನ ವಶದಲ್ಲಿದೆ ; ಇದನ್ನು ವಿಶ್ವಾಸವಿಟ್ಟು ಕೊಟ್ಟವರು ಮೈಸೂರು ಓರಿಯಂಟಲ್ ಲೈಬ್ರೆರಿಯಲ್ಲಿ ಆಗ ಇದ್ದ ಶ್ರೀಮಾನ್ ಎಂ. ಡಿ. ಬಸಪ್ಪನವರು. ಈ ಪ್ರತಿಯಲ್ಲಿ ನಂಬಿಯಣ್ಣನ ರಗಳೆ ಮೊದಲಾದ ಬೇರೆ ಗ್ರಂಥಗಳೂ ಸೇರಿವೆ. ಇಲ್ಲಿ ಬಂದಿರುವ ಶೂನ್ಯಸಂಪಾದನೆಗೆ ಪೀಠಿಕಾ ಭಾಗವಿಲ್ಲ ; ಪಿಂಡಸ್ಥಲದ ವಚನದಿಂದ ಮೊದಲಾಗುತ್ತದೆ ; ಒಟ್ಟು ವಚನಸಂಖ್ಯೆ ೧೦೧೨ ಮಾತ್ರ ; "ಶಿವಗಣಪ್ರಸಾದಿ ಮಹಾದೇವಗಳು" ಇದನ್ನು ರಚಿಸಿದ ಸಂಗತಿ ಕೊನೆಯಲ್ಲಿ ಹೇಳಿದೆ ; ಬೇರೆ ಯಾವ ಸಂಗ್ರಹಕಾರರ ಹೆಸರೂ ಇಲ್ಲ. (೨) ಕೆಂಚವೀರಣ್ಣೊಡೆಯನ ಪ್ರತಿ. ಇದು ದೊರೆತಂತೆ ಇದುವರೆಗೂ ತಿಳಿಯಬಂದಿಲ್ಲ. (೩) ಕಲ್ಲೇಶ್ವರದೇವರು ನಂಜೆಯ ದೇವರು ಮೊದಲಾದವರು ವಿಚಾರಿಸಲು ಅವರಿಗೆ ಹಲಗೆಯ ದೇವರು ನಿರೂಪಿಸಿದ್ದು.

ಮಹಾದೇವಿಯಕ್ಕನು ಕೌಶಿಕನನ್ನು ಬಿಟ್ಟುಬಂದ ಅಂಶವನ್ನು, "ಭವಿಯ ಸಂಗವಮಂ ತೊಱೆದು", "ಅಂಗಸಂಗವಮಂ ತೊಱೆದು", "ಲಿಂಗಧಾರಣವಾಗ ಲೊಲ್ಲೆನೆಂದ ಭವಿಯ ಸೋಂಕದೆ ಅಂಗಸಂಗವಮಂ ತೊಱೆದು"—ಎಂಬಿಷ್ಟರಲ್ಲೇ, ಅವನ ಹೆಸರು ಕೂಡ ಎತ್ತದೆ ಸೂಚಿಸಿ, ಮದುವೆಯ ವಿಚಾರವನ್ನು ತೇಲಿಸಿಯೋ ನಿಷೇಧಿಸಿಯೋ ಮುಗಿಸಿಬಿಟ್ಟಿದ್ದಾರೆ. ಹಲಗೆಯ ದೇವರ ಪ್ರತಿಯಲ್ಲಾದರೆ, ಮಹಾದೇವಿಗೆ ಪಾರ್ವತಿ ಕೊಟ್ಟ ಶಾಪವೂ, ಅದರಂತೆ ಅವಳು ಭೂಮಿಯ ಮೇಲೆ ಹುಟ್ಟಿ, "ದೇವಿಯರಿತ್ತ ಅವಧಿ ಬರೆ ಕೌಶಿಕನೆಂಬ ರಾಯಂಗೆ ವಧುವಾಗಿ, ನೀರು ತಾವರೆಯಂತೆ ಕಣ್ಣು ಕಾಡಿಗೆಯಂತೆ ನೆಯಿ ನಾಲಗೆಯಂತೆ ಗಾಳಿ ಧೂಳಿನಂತೆ ಆ ಸಂಸಾರದೊಳಗಿದ್ದೂ ಇಲ್ಲದೆ, ತನುವನೆ ಸಂಸಾರಕ್ಕೆ ಎರವಾಗಿ ಕೊಟ್ಟು ಮನವೆಚ್ಚಿ ಲಿಂಗದಲ್ಲಿದ್ದು ಗುರುಚರ ಲಿಂಗದಲ್ಲಿ ಪರಮದಾಸೋಹದಲ್ಲಿ ಭಕ್ತಿಯ ಮಾಡುವಲ್ಲಿ, ಆತ ಕೊಟ್ಟ ಭಾಷೆಗೆ ಉತ್ತರವಮಂ ಮಾಡಿ ಹೋಗುತ್ತಿರೆ ಸೀರೆಯಂ ಪಿಡಿದೆಳೆಯೆ ಬಿಟ್ಟು ದಿಗಂಬರಿಯಾಗಿ ದಿಗಂಬರನ ನೆನೆವುತ್ತ" ಹೊರಹೊರಟ ವೃತ್ತಾಂತವೂ ಸ್ಪಷ್ಟೋಕ್ತಿಯಲ್ಲಿ ನಿರೂಪಿತವಾಗಿವೆ. ಇದು ಹರಿಹರ ಕವಿಯ 'ಮಹಾದೇವಿಯಕ್ಕನ ರಗಳೆ'ಯ ಕಥಾಸಂಗತಿಯನ್ನು ನೆನಪಿಗೆ ತರುತ್ತದೆ.

ಶೂನ್ಯಸಂಪಾದನೆಯ ಭಿನ್ನ ಪಾಠಗಳಲ್ಲಿ ಬಂದಿರುವ ಮಹಾದೇವಿಯಕ್ಕನ ವಚನಗಳನ್ನೆಲ್ಲಾ ಸಂಗ್ರಹಿಸುವ ಕೆಲಸಕ್ಕೆ ಈ ಲೇಖನದಲ್ಲಿ ಕೈಹಾಕಿಲ್ಲ; ಅದು ಮುಂದೆ ಮಾಡಬೇಕಾದ ಕಾರ್ಯ. ಇವುಗಳಲ್ಲಿ ಮಹಾದೇವಿಯಕ್ಕನ ಜೀವನ ಕಥೆಗೆ ಸಂಬಂಧಪಟ್ಟ ಒಂದು ಪ್ರಸಂಗದ ನಿರೂಪಣೆ ಹೇಗೆ ಬಂದಿದೆಯೆಂಬುದನ್ನು ಮಾತ್ರ ಗಮನಿಸಿ, ಅಲ್ಲಿ ಉದಾಹೃತವಾಗಿರುವ ಕೆಲವು ವಚನಗಳನ್ನು ಉದ್ಧರಿಸುತ್ತೇವೆ. ಮಹಾದೇವಿಯಕ್ಕನನ್ನು ಕಿನ್ನರ ಬೊಮ್ಮಯ್ಯನು ಸಂಧಿಸಿದ ಪ್ರಸಂಗವೇ ಇದು.

---

ಇದರ ಕೈಬರೆಹದ ಪ್ರತಿ ಮೈಸೂರು ಓರಿಯೆಂಟಲ್ ಲೈಬ್ರೆರಿಯಲ್ಲಿದೆ-ನಂ. KA 105. (೪) ಗುಮ್ಮಳಾಪುರದ ಸಿದ್ಧಲಿಂಗಯತಿಯದು. ಇದರ ಒಂದು ಓಲೆಯ ಪ್ರತಿ ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರ ವಶದಲ್ಲಿದೆ. (೫) ಗೂಳೂರಿನ ಸಿದ್ಧವೀರಣಾರ್ಯನದು. ಇದನ್ನು ಶ್ರೀಮಾನ್ ಹಳಕಟ್ಟಿಯವರು ಅಚ್ಚುಮಾಡಿಸಿದ್ದಾರೆ. ಈ ಕೊನೆಯದೊಂದು ಹೊರತು ಬೇರೆ ಯಾವ ಪಾಠವೂ ಇದುವರೆಗೆ ಅಚ್ಚಾಗಿಲ್ಲ.

ಇದರ ಪ್ರಸ್ತಾವ ಶಿವಗಣಪ್ರಸಾದಿ ಮಹಾದೇವಯ್ಯನ ಪಾಠದಲ್ಲಿ—ಮಹಾದೇವಿಯಕ್ಕನು"....ದೇಶಾಂತರಮುಖದೊಳ್ ಚರಿಸಿ ಬಪ್ಪಾಗಳು ಕಿನ್ನರಬೊಮ್ಮತಂದೆಗಳು ಕಂಡು [ಪ] ರುಷಿಸಿ ನೋಡಲು, ಅಂತರಂಗದ ಜ್ಞಾನಾಗ್ನಿಯೊಳ್ ಕಾಮನಂ ಸುಟ್ಟು ಭಸ್ಮಮಂ ಮಾಡಿ ಅವರಂ ಬೀಳ್ಕೊಂಡು ಕಲ್ಯಾಣದತ್ತಲಭಿಮುಖವಾಗಿ ನಡೆತಂದು...." ಎಂಬಿಷ್ಟರಲ್ಲಿ ಮುಗಿದಿದೆ ; ಯಾವ ವಚನಗಳೂ ಉದಾಹೃತವಾಗಿಲ್ಲ. ಗುಮ್ಮಳಾಪುರದ ಸಿದ್ಧಲಿಂಗಯತಿಯ ಪಾಠದಲ್ಲಿ ವಸ್ತು ಇನ್ನು ಸ್ವಲ್ಪ ವಿಸ್ತಾರವಾಗುತ್ತದೆ. ಮಹಾದೇವಿಯಕ್ಕನು ದಿಗಂಬರೆಯಾಗಿ ಬರುತ್ತಿದ್ದಾಳೆಂಬುದನ್ನು ಬಸವಣ್ಣನಿಂದ ತಿಳಿದು, "ಪ್ರಭುದೇವರು ಸಕಲ ಪ್ರಮಥರಿಗೆ ಕಾಮಸಂಹಾರಿಯೆಂಬುದಂ ಪ್ರತ್ಯಕ್ಷವ ತೋಱಬೇಕೆಂದು ಭಕ್ತಿವಿಸ್ತಾರದಿಂದ ಕಿನ್ನರಯ್ಯಗಳಂ ಒಪ್ಪಿ ಕಳುಹಲು, ಆ ಪರಮ [ಜ್ಞಾ]ನಿಯಪ್ಪ ಕಿನ್ನರಯ್ಯಗಳು ದಳದಳನೆ ಇದಿರಿನಲಿ ಬಂದು ಕಂಡು ಭಕ್ತಿಭಾವದಿಂದ ಸ್ಪರುಶಿಸಿ ನೋಡಲು, ಆ ಮಹಾದೇವಿಯಕ್ಕಗಳು ತಮ್ಮ ಅಂತರಂಗಜ್ಞಾನಾಗ್ನಿಯೊಳ್ ಕಾಮನಂ ಸುಟ್ಟು ಭಸ್ಮಮಂ ಮಾಡಿ ಕಿನ್ನರಯ್ಯಗಳಿಗೆ ತೋಱಿದ ಪ್ರಸ್ತಾವದ ವಚನ—

> ಅಂಗದ ಭಂಗವ ಲಿಂಗಮುಖದಿಂದ ಗೆಲಿದೆ. ಮನದ ಭಂಗವ ಅಱುಹಿನ ಮುಖದಿಂದ ಗೆಲಿದೆ. ಜೀವದ ಭಂಗವ ಶಿವಾನುಭಾವದಿಂದ ಗೆಲಿದೆ. ಕರಣದ ಕತ್ತಲೆಯ ಬೆಳಗನುಟ್ಟು ಗೆಲಿದೆ. ಜವ್ವನದ ಹೊಱವಿಂಚಿನಲ್ಲಿ ನಿಮ್ಮ ಕಂಗೆ ತೋಱುವ ಕಾಮನ ಸುಟ್ಟುರುಹಿದ ಭಸ್ಮವ ನೋಡಯ್ಯಾ. ಚೆನ್ನಮಲ್ಲಿಕಾರ್ಜುನ[ನ] ಕಾಮನ ಕೊಂದು ಮನಸಿಜನನುಳುಹಿದರೆ ಮನಸಿಜನ ತಲೆಯ ಬರಹವ ತೊಡೆವೆನು.[11]

ಇಂತು ಕಾಮನ ಸುಟ್ಟು ಭಸ್ಮಮಂ ಮಾಡಿ ಕಿನ್ನರಯ್ಯಗಳಿಗೆ ತೋಱಿಸಿ ಅವರಂ ಬೀಳ್ಕೊಂಡು ಕಲ್ಯಾಣದತ್ತಲಭಿಮುಖವಾಗಿ ನಡೆತಂದು . . . ."— ಹೀಗೆ ನಿರೂಪಣೆಯಿದೆ. ಗೂಳೂರು ಸಿದ್ಧವೀರಣಾರ್ಯನ ಪಾಠದ ಆನುಪೂರ್ವಿಯೂ ಇದೇ. ಆದರೆ, ಅಲ್ಲಿ ಇನ್ನೆರಡು ವಚನಗಳು ಹೆಚ್ಚಾಗಿ ದೊರೆಯುತ್ತವೆ. (ಇವುಗಳಲ್ಲಿ ಒಂದು ಕಿನ್ನರಯ್ಯನದು ; ಇನ್ನೊಂದು ಮಹಾದೇವಿಯಕ್ಕನದು. ಈ ಎರಡನ್ನೂ ಮುಂದೆ ಉದ್ಧರಿಸಲಾಗುತ್ತದೆ).

---

11 ಇದು ಹಳಕಟ್ಟಿಯವರ 'ಮಹಾದೇವಿಯಕ್ಕನ ವಚನಗಳ'ಲ್ಲಿ ಬಂದಿವೆ. (ಪು. ೪೬–ಸಂ. ೭) ; ಅಮುಖ್ಯವಾದ ಪಾಠಭೇದವುಂಟು.

ಹೀಗೆ, ಮೇಲೆ ನಿರ್ದೇಶಿಸಿದ ಶೂನ್ಯಸಂಪಾದನೆಯ ಪಾಠಗಳಲ್ಲಿ ಕಿನ್ನರಯ್ಯನು ಮಹಾದೇವಿಯ ದೇಹವನ್ನು ಭಕ್ತಿಭಾವದಿಂದ ಸ್ಪರ್ಶಿಸಿ ಪರೀಕ್ಷಿಸಿಅವಳುಕಾಮಾ ತೀತಳೆಂಬುದನ್ನು ಅರಿತನೆಂದೂ, ಪ್ರಭುದೇವರು ಆತನನ್ನು ಈ ಉದ್ದೇಶ ಕ್ಕಾಗಿಯೇ ಕಳಿಸಿದನೆಂದೂ ಪ್ರತೀತಿಯುಂಟಾಗುತ್ತದೆ. ಆದರೆ, ಹಲಗೆಯ ದೇವರ ಶೂನ್ಯಸಂಪಾದನೆಯ ಪಾಠದಲ್ಲಿ ಈ ಪ್ರಸಂಗ ಇನ್ನಷ್ಟು ವಿಸ್ತಾರವಾಗಿ, ಕೆಲವು ಮಟ್ಟಿಗೆ ಬೇರೆ ರೀತಿಯಲ್ಲಿ, ಜರುಗುತ್ತದೆ. ಮಹಾದೇವಿಯಕ್ಕನು "ಶ್ರೀ ಕಲ್ಯಾಣದತ್ತಲಭಿಮುಖೆಯಾಗಿ ಬರುತ್ತಿರಲಾಗ ಕಲ್ಯಾಣದ ಹೊಱವಳಯಕ್ಕೆ ತನ್ನ ಲೀಲಾವಿನೋದದಿಂ ಕಿನ್ನರ ಬ್ರಹ್ಮಯ್ಯಗಳು ಬಂದಿರಲಾ ಕಾಲದಲ್ಲಿ ಅಕ್ಕ ಗಳ ದಿಗಂಬರವೇಷಮಂ ನಿರ್ವಾಣದ ನಿಲುಕಡೆಯಂ ದಿವ್ಯಸ್ವರೂಪಿನ ಲಾವಣ್ಯ ವಂ ಕಂಡು, ಕಿನ್ನರ ಬೊಮ್ಮಣ್ಣಗಳು—ಈಕೆ ಲಿಂಗಾನುಭಾವಸಂಪನ್ನೆಯಾದರೆ ಗುರು ತಾಯೆಂದು ಶರಣೆಂಬೆನು. ದೇಹಲಜ್ಜಾಭಿಮಾನವುಳ್ಳಡೆ ಸ್ತ್ರೀಯಾಗಿ ಕೈವಿಡಿ ವೆನು—ಎಂದು ತನ್ನ ತಾ ನಿಶ್ಚೈಸಿ," ಮಹಾದೇವಿಯಕ್ಕನನ್ನು ಒರೆದೊರೆದು ನೋಡಿದನಂತೆ. ಆ ಪ್ರಸ್ತಾವದಲ್ಲಿ ಅವನ ಈ ಎರಡು ವಚನಗಳನ್ನು ಕೊಟ್ಟಿ ದ್ದಾರೆ:

ಕಾಯದಲ್ಲಿ ಕಳವಳವಿರಲು ಪ್ರಾಣದಲ್ಲಿ ಮಾಯೆಯಿರಲು ಏತಱ ಗಮನ, ಇದೇತಱ ನಿರ್ವಾಣಾ? ಮಹಾಲಿಂಗ ತ್ರಿಪುರಾಂತಕನು ನಿನ್ನ ಸಂಸಾರಿಯೆಂಬನಲ್ಲದೆ ಸಜ್ಜನೆಯೆಂದು ಕೈವಿಡಿವನಲ್ಲ ಕೇಳಾ ಮರುಳೆ.[12]

ನಿನ್ನ ಸ್ವರೂಪ ಕಂಡೆನ್ನ ದೃಷ್ಟಿ ನಟ್ಟುದೆನಗೆ. ನಿನ್ನ ಲಾವಣ್ಯರಸವ ಕಂಡು ಮನ ಹಾರೈಸಿತ್ತೆನಗೆ. ನಿನ್ನ ಪ್ರೌಢಿಯಿಂದ ಕೂಡಿ[ಹೆ]ನೆಂಬುದು ಭಾವದಲ್ಲಿ ಬೞ್ಚ ಬಱಿಯ ಹೆಂಗುಸಾಗಿ ತೋಱುತ್ತೆನಗೆ. ಮಹಾಲಿಂಗತ್ರಿಪುರಾಂತಕನೆನಗೊಡ್ಡಿದ ಮಾಯೆಯ ನಿನ್ನ ಸಮಸುಖ ಕೂಟದೊಳಿರ್ದು ಶಿವಭಾವಭಕ್ತಿಯಿಂ ಗೆಲುವೆನು ಬಾರೌ ಹೆಣ್ಣೆ ಎಂದು ಕೈವಿಡಿದೆನು.[13]

ಕಿನ್ನರ ಬೊಮ್ಮಯ್ಯನ ಈ ಕಾಮಾಸಕ್ತಿಯನ್ನು ಮಹಾದೇವಿಯಕ್ಕನು ಜರೆದು ಧಿಕ್ಕರಿಸುವ ವಚನಗಳು ಇವು:

---

[12] ಈ ವಚನ ಗೂಳೂರು ಸಿದ್ಧವೀರಣಾರ್ಯನ ಪಾಠದಲ್ಲೂ ಬಂದಿವೆ.

[13] ನಾವು ಹಿಂದೆಯೇ ಉದಾಹರಿಸಿರುವ 'ವಚನ ಸಂಗ್ರಹ'ದಲ್ಲಿ (ನ್ಯೆ. ಓ. ಲೈ. K 499) ಕಿನ್ನರಬೊಮ್ಮಯ್ಯನ ಮೂರು ವಚನಗಳಿವೆ. ಆ ಮೂರೂ ಹಲಗೆಯ

ನೋಡುವ ಕಂಗಳಿಗೆ ರೂಪಿಂಬಾಗಿರಲು ನೀವು ಮನನಾಚದೆ ಬಂದಿರಣ್ಣಾ. ಕೇಳಿದ ಶ್ರೋತ್ರಸೊಗಸಿಗೆ ನೀವು ಮರುಳಾಗಿ ಬಂದಿರಣ್ಣಾ. ನಾರಿಯೆಂಬ ರೂಪಿಂಗೆ ನೀವು ಒಲಿದು ಬಂದಿರಣ್ಣಾ. ಮೂತ್ರವು ಬಿಂದುವೊಸರುವ ನಾಳ ವೆಂದು ಕಂಗಾಣದೆ ಮುಂದುಗೆಟ್ಟು ಬಂದಿರಣ್ಣಾ. ಬುದ್ಧಿಗೇಡತನದಿಂದ ಪರ ಮಾರ್ಥದ ಸುಖವ ಹೋಗಲಾಡಿಕೊಂಡು ಇದಾವ ಕಾರಣವೆಂದಱಿಯದೆ ನೀವು ನರಕಹೇತುವೆಂದಱಿದು ಮನಹೇಸದೆ ಬಂದಿರಣ್ಣಾ. ಚೆನ್ನಮಲ್ಲಿಕಾರ್ಜುನನಲ್ಲದೆ ಮಿಕ್ಕಿಹ ಪುರುಷರೆನಗೆ ಸಹೋದರ. ಛೀ ಹೋಗುಮರುಳೆ.

ಬಟ್ಟಿಹ ಮೊಲೆಯ ಭರದ ಜವ್ವನದ ಚೆಲುವ ಕಂಡು ಬಂದಿರಣ್ಣಾ. ಅಣ್ಣಾ ನಾನು ಹೆಂಗೂಸಲ್ಲ, ಅಣ್ಣಾ ನಾನು ಸೂಳೆಯಲ್ಲ. ಅಣ್ಣಾ ಮತ್ತೆ ನನ್ನ ಕಂಡು ಕಂಡು ಆರೆಂದು ಬಂದಿರಣ್ಣಾ? ಚೆನ್ನಮಲ್ಲಿಕಾರ್ಜುನನಲ್ಲದ ಮಿಕ್ಕಿನ ಪರ ಪುರುಷನು ನಮಗಾಗದ ಮೋಱೆ ನೋಡಣ್ಣಾ.

ಬಳಿಕ ಈ ವಚನ ಬರುತ್ತದೆ:

ಎನ್ನಂತೆ ಪುಣ್ಯಗೆಯ್ದವರುಂಟೆ, ಎನ್ನಂತೆ ಭಾಗ್ಯಗೆಯ್ದವರುಂಟೆ! ಕಿನ್ನರ ನಂತಪ್ಪ ಸೋದರವೆನಗೆ, ಏಳೇಳು ಜನ್ಮದಲ್ಲಿ ಶಿವಭಕ್ತರೆ ಬಳಗವೆನಗೆ, ಚೆನ್ನಮಲ್ಲಿ ಕಾರ್ಜುನನಂತಪ್ಪ ಗಂಡ ನೋಡಾ ಎನಗೆ.[14]

ಇಷ್ಟಾದರೂ ಕಿನ್ನರಯ್ಯನು ಅರಿತುಕೊಳ್ಳಲಿಲ್ಲ. "ಬಱಿಯ ಮಾತಿನ ಬನ್ನಣೆಯ ಪಸರಿಸೆ ನಾನು ಬಿಡುವೆನೆ ಬಾರೆಂದು ತುಡುಕಿ ಹಿಡಿಯಲು, ಆ ಮಹಾದೇವಿ ನೀನಿಂತು ಮುಂದುಗೆಡುವರೆ ನನ್ನ ತನುವನೊಪ್ಪಿಸಿಹೆನು ನಿನ್ನ ಮನಕೆ ಬಂದಂತೆ

---

ದೇವರ ಶೂನ್ಯಸಂಪಾದನೆಯಲ್ಲಿ ಕಿನ್ನರಯ್ಯ ಮಹಾದೇವಿಯರ ಪ್ರಸಂಗದ ನಿರೂಪಣೆ ಯಲ್ಲಿ ಬಂದಿರುವುದನ್ನು ಗಮನಿಸಬೇಕು. ಪಾಠಭೇದಗಳುಂಟು; ಮುಖ್ಯವೆಂದು ತೋರಿದವನ್ನು ಆಯಾ ವಚನದ ಕೆಳಗೆ ಈ ಲೇಖನದಲ್ಲಿ ಸೂಚಿಸಿದ್ದೇವೆ. ಮೇಲಿನ ವಚನದ ಪಾಠ ಈ ರೀತಿ ಇದೆ: "ದೃಷ್ಟಿ ನಟ್ಟು ಮನ ಹಾರೈಸಿತೆನಗೆ. ಭಾವದಲ್ಲಿ ಬಱಿಹೆಂಗುಸಾಗಿ ತೋರಿತ್ತೆನಗೆ. ಮಹಾಲಿಂಗ ತ್ರಿಪುರಾಂತಕ ಎನಗೊಡ್ಡಿದ ಮಾಯೆಯ ನಿನ್ನಿಂದ ಮುಱಿವೆ ಗೆಲುವೆ." ಈ ಪಾಠದಲ್ಲಿ ಮೂಲದ ಕೆಲವು ಮಾತು ಬಿಟ್ಟು ಹೋಗಿದೆಯೋ, ಶೂನ್ಯಸಂಪಾದನೆಯ ಪಾಠವೇ ಇದರ ವಿಸ್ತಾರವೋ— ಮುಂದೆ ನಿರ್ಣಯವಾಗಬೇಕು.

14 ಈ ವಚನ ಗೂಳೂರು ಸಿದ್ಧವೀರಣಾರ್ಯನ ಪಾಠದಲ್ಲಿಯೂ ಬಂದಿದೆ. ಹಳ ಕಟ್ಟಿಯವರ 'ಮಹಾದೇವಿಯಕ್ಕನ ವಚನ'ಗಳಲ್ಲಿಯೂ ಸೇರಿದೆ. (ಪು. ೧೦-ಸಂ. ೧೧).

ಮಾಡಿಕೊಳೆಂದು ಒಪ್ಪಿಸಲು, ಆತಂ ಸರ್ವಾಂಗಸ್ಥಾನಮಾನಂಗಳಂ" ಸ್ಪರ್ಶಿಸಿ ನೋಡಿ ಆಕೆಗೆ ದೇಹಾಭಿಮಾನವಿಲ್ಲದ್ದನ್ನು ತಿಳಿಯುತ್ತಾನೆ. ಆಕೆ ಕಾಮನನ್ನು ಸುಟ್ಟು ಬೂದಿಮಾಡಿದ ಕುರುಹನ್ನು ಕಂಡು ಭೀತನಾಗಿ ಈ ವಚನವನ್ನು ಹೇಳುತ್ತಾನೆ:

ಮಸ್ತಕವ ಮುಟ್ಟಿ ನೋಡಿದರೆ ಮನೋಹರನುಳುಮೆ ಕಾಣಬಂದಿತ್ತು. ಮುಖಕಮಲವ ಮುಟ್ಟಿನೋಡಿದರೆ ಮೂರ್ತಿಯ ಉಳಿವು ಕಾಣಬಂದಿತ್ತು. ಕೊರಳ ಮುಟ್ಟಿ ನೋಡಿದರೆ ಗರಳಧರನಿರವು ಕಾಣಬಂದಿತ್ತು. ತೋಳುಗಳ ಮುಟ್ಟಿನೋಡಿದರೆ ಶಿವನಪ್ಪು ಕಾಣಬಂದಿತ್ತು. ಉರಸ್ಥಲವ ಮುಟ್ಟಿ ನೋಡಿದರೆ ಕರಸ್ಥಲದಂಗ ಕಾಣಬಂದಿತ್ತು. ಬಸುರ ಮುಟ್ಟಿ ನೋಡಿದರೆ ಬ್ರಹ್ಮಾಂಡವಡಗಿ[ತ್ತು] ಕಾಣಬಂದಿತ್ತು. ಗುಹ್ಯವ ಮುಟ್ಟಿ ನೋಡಿದರೆ ಕಾಮದಹನ ಕಾಣಬಂದಿತ್ತು. ಮಹಾಲಿಂಗತ್ರಿಪುರಾಂತಕ ದೇವ, ಮಹಾದೇ[ವಿಯ]ಕ್ಕನ ನಿಲವರಿಯದೆ ಅಳುಪಿ ಕೆಟ್ಟೆನು.[15]

ಇದಕ್ಕೆ ಉತ್ತರವಾಗಿ, ನಾವು ಹಿಂದೆಯೇ ಉದಾಹರಿಸಿರುವ "ಅಂಗದ ಭಂಗವ ...." ಎಂಬ ಮಹಾದೇವಿಯಕ್ಕನ ವಚನ ಬರುತ್ತದೆ. ಆ ಬಳಿಕ, ಕಿನ್ನರಯ್ಯನು ವಿಷಯ ಪರವಶತೆಯಿಂದ ತಾನು ಕೆಟ್ಟೆನೆಂದು ಮೂರು ವಚನಗಳಲ್ಲಿ ಉಮ್ಮಳಿಸಿದ್ದನ್ನು ಕಂಡು, ಮಹಾದೇವಿಯಕ್ಕನು ಅವನನ್ನು ಹೀಗೆ ಸಂತೈಸುತ್ತಾಳೆ:

ಎಲೆ ಅಣ್ಣಾ ಎಲೆ ಅಣ್ಣಾ ನೀವು ಮರುಳಲ್ಲಾ! ಅಣ್ಣಾ ಎನ್ನ ನಿನ್ನಳವೆ; ಹದಿನಾಲ್ಕು ಲೋಕವ ನುಂಗಿದ ಕಾಮನ ಬಾಣದ ಗುಣ ಎನ್ನನಿನ್ನಳವೆ? ನಾರುವ ಮುಗ್ಗಿದಡೆ ಮಿಡಿಯ ಹರಿಯ ಹೊಯ್ಬರೆ? ಮುಗ್ಗಿದ ಭಂಗವ ಮುಂದೆ ರಣದಲ್ಲಿ ತಿಳಿವುದು ಇನ್ನ ನೀ ಸಂಹರಿಸಿ ಕೈಮುವ ಕೊಳ್ಳಿರಣ್ಣಾ. ಚೆನ್ನಮಲ್ಲಿಕಾರ್ಜುನನೆಂಬ ಹಗೆಗೆ ಬೆಂಗೊಡದಿರಣ್ಣಾ.

ಆಗ ಬೊಮ್ಮಯ್ಯನು ಈ ರೀತಿಯಾಗಿ ಬಿನ್ನೈಸುತ್ತಾನೆ:

ಶರಣಾರ್ತಿ ಶರಣಾರ್ತಿ ಎಲೆ ತಾಯೆ ನಮ್ಮವ್ವಾ, ಶರಣಾರ್ತಿ ಶರಣಾರ್ತಿ ಕರುಣಾಸಾಗರನಿಧಿಯೆ, ದಯಾಮೂರ್ತಿ ತಾಯೆ ಶರಣಾರ್ತಿ ಶರಣಾರ್ತಿ. ಮಹಾಲಿಂಗ ತ್ರಿಪುರಾಂತಕನೊಡ್ಡಿದ ತೊಡಕ ನೀವು ಬಿಡಿಸಿದಿರಾಗಿ

---

15 ಇದು 'ವಚನ ಸಂಗ್ರಹ' ದಲ್ಲಿ (ಮೈ. ಓ. ಲೈ. K 499) ಕಿನ್ನರ ಬೊಮ್ಮಯ್ಯನ ಹೆಸರಿನಲ್ಲಿ ದೊರೆಯುವ ವಚನ. ಮುಖ್ಯವಾದ ಪಾಠಭೇದಗಳಿಲ್ಲ.

ನಿಮ್ಮ ದಯದಿಂದ ನಾನು ಹುಲಿ ನೆಕ್ಕಿ ಬದುಕಿದೆನು, ಶರಣಾರ್ತಿ ತಾಯೆ.[16]

ವಿಷಯಗಳು ನಿರ್ವಿಷಯವಾದವಿಂದು. ಕರಣಂಗಳು ತರಹರಿಸಿ ನಿಂದ ವಿಂದು. ಎನ್ನ ಅಳಿಪೆಂಬ ಅ[ರ] ವಾವು ಮಡಿಯಿ[ತ್ತಿ]ಂದು. ಮಹಾಲಿಂಗ ತ್ರಿಪುರಾಂತಕಯ್ಯಾ, ಮಹಾದೇವಿಯಕ್ಕಗಳ ಧರ್ಮದಿಂದ ಹಿಂದಣ ಹುಟ್ಟು ಮುಱಿಯಿತಿಂದು.

ಇಷ್ಟೆಲ್ಲಾ ನಡೆದ ತರುವಾಯ ಮಹಾದೇವಿಯಕ್ಕನೂ ಕಿನ್ನರಬೊಮ್ಮಯ್ಯನೂ ಒಬ್ಬರನ್ನೊಬ್ಬರು ನಮಸ್ಕಾರಪೂರ್ವಕವಾಗಿ ಬೀಳ್ಕೊಳ್ಳುತ್ತಾರೆ ; ಈಕೆ ಕಲ್ಯಾಣನಗರಕ್ಕೆ ಬರುತ್ತಾಳೆ.

ಈ ಪ್ರಸಂಗ ಮೇಲಿನ ನಿರೂಪಣೆಯಂತೆಯೇ ನಡೆಯಿತೇ ಹೇಗೆ ಎಂಬುದನ್ನು ನಿರ್ಧರಿಸಿ ಹೇಳುವುದು ಅಸಾಧ್ಯ.[17] ಶೂನ್ಯಸಂಪಾದನೆಯ ಈ ಪಾಠದ ಕರ್ತೃವಿಗೆ ಇಷ್ಟು ವಿವರಣೆಗೆಲ್ಲ ಆಧಾರ ಎಲ್ಲಿ ದೊರೆಯಿತೋ. ಆತನ "ಕಥಾಸಾಂಗತ್ಯ" ಹಾಗಿರಲಿ ; ಇಲ್ಲಿ ಉದಾಹರಿಸಿರುವ ವಚನಗಳನ್ನೇ ನೋಡಿದರೂ ಇಂಥದೊಂದು ಸಂದರ್ಭ ನಡೆದಿರುವುದು ಅಸಂಭವವಲ್ಲವೆನ್ನಿಸುತ್ತದೆ. ಈ ವಚನಗಳಲ್ಲಿ ಯಾವುವೂ ಕಲ್ಪನೆಯ ಮಾತುಗಳಂತಿಲ್ಲ. ಮಹಾದೇವಿಯಕ್ಕನ ಒಂದು ವಚನ ದಲ್ಲಿ ಕಿನ್ನರಯ್ಯನ ಹೆಸರು ಬಂದಿದೆ. ಕಿನ್ನರಯ್ಯನ ವಚನಗಳಲ್ಲಂತೂ ಮಹಾ ದೇವಿಯ ಹೆಸರೂ ಅವಳನ್ನು ಅವನು ಮುಟ್ಟನೋಡಿದ ವಿಷಯವೂ ಅದಕ್ಕಾಗಿ ಅವನು ಪಟ್ಟ ಅನುತಾಪವೂ ಸ್ಪಷ್ಟವಾಗಿ ಕಾಣಿಸುತ್ತವೆ. ಅಧೋಗತಿಗೆ ಜಾರು ತ್ತಿದ್ದ ತಾನು ಆಕೆಯ ಕರುಣೆಯಿಂದ ಉದ್ಧಾರವಾದ ಸಂಗತಿಯನ್ನು ಕಿನ್ನರ

---

16 ಇದು 'ವಚನಸಂಗ್ರಹ' ದಲ್ಲಿ (ಮೈ. ಓ. ಲೈ. K 499) ದೊರೆಯುವ ಮೂರನೆಯ ವಚನ. ಅಲ್ಲಿ ಇದರ ಪಾಠ ಹೀಗಿದೆ: "ಶರಣು ಶರಣಾರ್ತಿ ಎಮ್ಮವ್ವ, ಶರಣುಶರಣಾರ್ತಿ ದಯಾಮೂರ್ತಳೆ, ಶರಣುಶರಣಾರ್ತಿ ಎನ್ನಕ್ಕ ಮಹಾದೇವಿ. ಮಹಾಲಿಂಗತ್ರಿಪುರಾಂತಕನೊಡ್ಡಿದ ತೊಡಕ ನೀವು ಬಿಡಿಸಿದಿರಾಗಿ ನಿಮ್ಮಿಂದಲಾನು ಬದುಕಿದೆನು, ಎಲೆ ತಾಯೆ ಶರಣುಶರಣಾರ್ತಿ." ಇಲ್ಲಿ ಮಹಾದೇವಿಯ ಹೆಸರು ಸೇರಿದೆ ; "ಹುಲಿ ನೆಕ್ಕಿ ಬದುಕಿದೆನು" ಎಂಬ ಸ್ವಾರಸ್ಯವಾದ ಚಿತ್ರ ಬಿಟ್ಟುಹೋಗಿದೆ.

17 ಚೆನ್ನಬಸವಾಂಕನ 'ಮಹಾದೇವಿಯಕ್ಕನ ಪುರಾಣ' ದಲ್ಲಿ (ಸಂಧಿ ೨೯) ಈ ಪ್ರಸಂಗದ ವಿಷಯ ಹೆಚ್ಚುಕಡಮೆ ಇವೇ ರೀತಿಯಾಗಿ ಬಂದಿವೆ ; ಮಹಾದೇವಿಯಕ್ಕನ ಸತ್ತ್ವವನ್ನರಿತ ಬಳಿಕ ಕಿನ್ನರಬೊಮ್ಮಯ್ಯನು ಆಕೆಯನ್ನು ಕಲ್ಯಾಣಕ್ಕೆ ಕರೆದುತಂದ ನೆಂಬ ಅಂಶ ಹೆಚ್ಚಾಗಿದೆ.

ಯ್ಯನು "ನಾನು ಹುಲಿ ನೆಕ್ಕಿ ಬದುಕಿದೆನು" ಎಂದು ಹೇಳಿರುವುದು ಅರ್ಥಗರ್ಭಿತ ವಾಗಿದೆ, ಅಕೃತಕವೂ ಆಗಿದೆ.

ಕೌಶಿಕನನ್ನು ತೊಡಹಿಬಂದ ಮಾತ್ರಕ್ಕೇ ಮಹಾದೇವಿಯಕ್ಕನ ಕೋಟಲೆ ಗಳು ಹರಿಯಲಿಲ್ಲ. ಆವಳ ಅನುಪಮವಾದ ಚೆಲುವು ಜೊತೆಯಲ್ಲೇ ಶತ್ರುವಾಗಿ ಉದ್ದಕ್ಕೂ ಬಂದಿತು. ದಾರಿಯಲ್ಲಿ ಎಷ್ಟೋ ಮಂದಿ ಅವಳ ರೂಪಿಗೆ ಮರುಳಾಗಿ, ಅವಳ ದಿಗಂಬರವೇಷವನ್ನು ಕಂಡು ಉದ್ರಿಕ್ತರಾಗಿ ಕೆಣಕಿ ಪೀಡಿಸಿರಬೇಕು. (ಇಂಥ ಪ್ರಸಂಗಗಳು ನಡೆದಿರಬೇಕೆಂಬುದು ಆಕೆಯ ವಚನಗಳಿಂದಲೇ ವ್ಯಕ್ತ ವಾಗುತ್ತದೆ.) ಕಿನ್ನರ ಬೊಮ್ಮಯ್ಯನಂಥ ಶಿವಶರಣನನ್ನೂ ಅವಳ ರೂಪು ಸೆಳೆ ಯದೆ ಬಿಡಲಿಲ್ಲ. ಒಂದು ವೇಳೆ, ಆಕೆಯ ನಿಷ್ಠೆಯನ್ನು ಪರೀಕ್ಷಿಸಲೆಂದೇ ಆತನು ಬಂದಿದ್ದರೂ, ಅವಳನ್ನು ನೋಡಿದ ಬಳಿಕ ಅವನು ಅವಶನಾಗಿ ದುಡುಕಿದ್ದು ನಿಜವೆಂದು ತೋರುತ್ತದೆ. ಮಹಾದೇವಿಯಕ್ಕನು ದೃಢವಿರಕ್ತಿಯ ಬಲದಿಂದ ತನ್ನ ಸತ್ತ್ವವನ್ನು ಕಾಪಾಡಿಕೊಂಡಳು, ಕಿನ್ನರಯ್ಯನನ್ನೂ ಬದುಕಿಸಿದಳು.

೫

ಹರಿಹರ ವಿರಚಿತವಾದ 'ಮಹಾದೇವಿಯಕ್ಕನ ರಗಳೆ' ಏಕಮುಖವಾದ ಗುರಿಯನ್ನುಳ್ಳ ಒಂದು ಸುಂದರ ಕಾವ್ಯ. ಮಹಾದೇವಿ "ಭವಿಯ ಸಂಗಂ ತಪ್ಪಿ, ಭವನ ಸಂಗವನಪ್ಪಿ" ದುದೇ ಇದರ ವಸ್ತು. ಗುಪ್ತಗಣನಾಥನೊಬ್ಬನನ್ನು "ಭವಿ" ಎಂದು ಕರೆದ ತಪ್ಪಿಗಾಗಿ ಈ ರುದ್ರಕನ್ನಿಕೆ ಭೂಮಿಯಲ್ಲಿ ಹೇಗೆ ಅವತರಿಸಿದಳು; ಚೆನ್ನಮಲ್ಲಿಕಾರ್ಜುನ ದೇವನೊಬ್ಬನಲ್ಲೇ ಮನನಟ್ಟು, ಭವಿಭಕ್ತರೆನ್ನದೆ ಮಿಕ್ಕ ಯಾವ ಪುರುಷನನ್ನೂ ವರಿಸಲು ಒಲ್ಲದಿದ್ದ ಈ ಚೆಲುವೆ ಕೌಶಿಕರಾಜನ ಕಣ್ಮನ ಗಳನ್ನು ಹೇಗೆ ಸೂರೆಗೊಂಡಳು; ತಾನು ಅವನನ್ನು ಮದುವೆಯಾಗದೆ ಹೋದರೆ ತನ್ನ ತಂದೆತಾಯಿಗಳನ್ನು ಅವನು ಕೊಲ್ಲಿಸಿಬಿಡುವನೆಂಬ ಬೆದರಿಕೆಯ ಮಾತನ್ನು ಕೇಳಿ, "ಏನಾಗಿಯಾದೊಡಂ ಭಕ್ತರಂ ರಕ್ಷಿಪುದು। ನಾನಾವಿಧಂ ಬಂದು ಶರಣರಂ ಸಲಹುವುದು॥" ಎಂಬ ಪುರಾತನ ವಾಕ್ಯವನ್ನು ನೆನೆದು ಈ ಶಿವಭಕ್ತರ ರಕ್ಷಣೆ ಗೋಸ್ಕರ ತನ್ನ ಶರೀರವನ್ನು ಕೌಶಿಕನಿಗೆ ಹೇಗೆ ಒಪ್ಪಿಸಿಕೊಟ್ಟಳು; ಮಲ್ಲಿ ಕಾರ್ಜುನನ ಪೂಜೆಯಲ್ಲೂ ಮಾಹೇಶ್ವರರ ಗೋಷ್ಠಿಯಲ್ಲೂ ದಿನವನ್ನೆಲ್ಲಾ ಕಳೆಯುತ್ತಾ ಕೌಶಿಕನ ಸಂಗದ ವಿಷಯಾನುಭವವನ್ನು ಕನಸಿನ ಕೂಟ

ದಂತೆಯೂ ಅದರಲ್ಲಿ ತನ್ನ ಶರೀರಕ್ಕಾದ ದುಃಖವನ್ನು ತಾನು ಸಾಕ್ಷಿಯಂತೆಯೂ ನೋಡುತ್ತಾ ಕಾಲವನ್ನು ಹೇಗೆ ನೂಕಿದಳು; ಕೌಶಿಕನು ಮೂರು ತಪ್ಪುಗಳನ್ನು ಮಾಡಿದ ಬಳಿಕ, ಹಿಂದೆ ಹೂಡಿದ್ದ ಒಪ್ಪಂದದ ಮೇರೆಗೆ ಬಿಡುಗಡೆಹೊಂದಿ ಕೇಶಾಂಬರೆಯಾಗಿ ಹೊರಟು "ಪುರದ ಹರಭಕ್ತಿ ಪರ್ವತಕೆಯ್ದಿ ನಡೆವಂತೆ" ಹೇಗೆ ನಿಷ್ಠೆಯಿಂದ ನಡೆದಳು; ಕೌಶಿಕನು ಮತ್ತೆ ತನ್ನನ್ನು ಪಡೆಯಲು ಒಡ್ಡಿದ ಜಾಲಗಳನ್ನೆಲ್ಲಾ ಪರಿಹರಿಸಿಕೊಂಡು ತನ್ನ ಹಂಬಲಿಕೆಯ ದೈವದಲ್ಲಿ ಹೇಗೆ ಐಕ್ಯವಾದಳು—ಎಂಬೀ ಕಥೆಯನ್ನು ಹರಿಹರನು ರಮ್ಯೋಜ್ಜ್ವಲ ಕಾವ್ಯವಾಗಿ ರಚಿಸಿದ್ದಾನೆ.

ಇದನ್ನು ಕಟ್ಟಲು ಅವನಿಗೆ ಐತಿಹ್ಯಗಳ ಜೊತೆಗೆ ಮಹಾದೇವಿಯಕ್ಕನ ವಚನಗಳೂ ಆಧಾರವಾಗಿದ್ದಂತೆ ತೋರುತ್ತದೆ. ಕಥಾಪುರುಷರ ವಚನಗಳನ್ನು ಅವನು ಸಮಯೋಚಿತವಾಗಿ ಉಪಯೋಗಿಸಿಕೊಂಡಿರುವುದಕ್ಕೆ 'ಬಸವರಾಜದೇವರ ರಗಳೆ', 'ನಂಬಿಯಣ್ಣನ ರಗಳೆ' ಮೊದಲಾದವುಗಳಲ್ಲಿ ನಿದರ್ಶನವಿದೆ.[18] ಆದರೆ 'ಮಹಾದೇವಿಯಕ್ಕನ ರಗಳೆ' ಯಲ್ಲಿ ವಚನಗಳ ಪ್ರಸಕ್ತಿ ಬರುವಷ್ಟುಮಟ್ಟಿಗೆ ಅವನ ಬೇರೆ ಯಾವ ಕೃತಿಯಲ್ಲೂ ಬರುವಂತೆ ಕಾಣುವುದಿಲ್ಲ. ಮಹಾದೇವಿ ಸಮಯಸ್ಫೂರ್ತಿಯಿಂದ "ಗೀತ" ಗಳನ್ನು ಹಾಡುತ್ತಿದ್ದಳೆಂಬುದನ್ನು ಹರಿಹರನು ಸ್ಪಷ್ಟವಾಗಿ ಉಲ್ಲೇಖಿಸಿದ್ದಾನೆ. ಕೆಳಗಿನ ನಿದರ್ಶನಗಳನ್ನು ನೋಡಿ:

"ಆಗಳಾಗಳಿನ ಶಿವಾನುಭವಕ್ಕೆ ನವಗೀತವಮಂ ಪಾಡಿ" (iv. ೩೪)
"ಗೀತವಮಂ ಪಾಡುತುಂ ಪೊಱಮಟ್ಟು ನಡೆತಂದು" (vii. ೩೯)
"ಕರತಳಕ್ಕೆ ಬಂದ ಮಲ್ಲಿನಾಥನಂ ಸಮರ್ಥೆ ನೋಡಿ
ಹರುಷದಿಂದ ಉರದೊಳೊತ್ತಿ ಕಣ್ಣೊಳೊತ್ತಿ ಮತ್ತೆ ನೋಡಿ
"ಮುದ್ದನಿತ್ತು ಗಲ್ಲಸುಖಕೆ ಬಲ್ಲುದೊಂದು ಸೊಲ್ಲ ಹಾಡಿ" (v. ೭೯.೮೧)

ಇವುಗಳ ಜೊತೆಗೆ ಕಿನ್ನರ ಬೊಮ್ಮಯ್ಯನ ಹೆಸರನ್ನೆತ್ತುವ ಈ ಕೆಳಗಿನ ಚರಣಗಳನ್ನೂ ಸೇರಿಸಬಹುದು:

"ಬಂದ ಕಿನ್ನರಬೊಮ್ಮಿ ತಂದೆಯಂ ಕಾಣುತುಂ
ಅಂದಂದಿನುಚಿತಕ್ಕೆ ಗೀತವಮಂ ಪಾಡುತುಂ" (vii. ೧೯೯-೨೦೦)

---

18 ಉದಾಹರಣೆ, 'ಬಸವರಾಜದೇವರ ರಗಳೆ', ಸ್ಥಲ ೧೨; 'ನಂಬಿಯಣ್ಣನ ರಗಳೆ,' ಸ್ಥಲ ೭.

ಬಸವಣ್ಣ, ಅಲ್ಲಮಪ್ರಭು ಮೊದಲಾದ ಶರಣರನ್ನು ಮಹಾದೇವಿ ಕಲ್ಯಾಣದಲ್ಲಿ ಸಂಧಿಸಿದ್ದಳೆಂಬ ನಿಶ್ಚಿತವೆಂದೇ ತೋರುವ ವಿಷಯವನ್ನು ಕೂಡ, ಅದು ತನ್ನ ಕಥಾವಾಹಿನಿಯ ಏಕಮುಖತೆಗೆ ಅಡ್ಡಿಯಾಗುವುದೆಂಬ ಶಂಕೆಯಿಂದಲೋ ಏನೋ, ತನ್ನ ಕಾವ್ಯದಲ್ಲಿ ಹೇಳದೆ ಬಿಟ್ಟ ಹರಿಹರನು ಕಿನ್ನರ ಬೊಮ್ಮಯ್ಯನ ಪ್ರಸಂಗವನ್ನು ಇಲ್ಲಿ ಸ್ಮರಿಸಿರುವುದು ಗಮನಾರ್ಹವಾದ ಸಂಗತಿ; ಶೂನ್ಯಸಂಪಾದನೆಯ ಕಥೆಗೆ ಇದು ಬೆಂಬಲವನ್ನು ಕೊಡುತ್ತದೆ. ಕಿನ್ನರಯ್ಯನ ಹೆಸರುಳ್ಳ ಮಹಾದೇವಿಯಕ್ಕನ ಒಂದು ವಚನವನ್ನಾದರೂ ಹರಿಹರನು ನೋಡಿಯೇ ಇರಬೇಕು. ("ಎನ್ನಂತೆ ಪುಣ್ಯಗೆಯ್ದವರುಂಟೆ . . . ." ಎಂಬ ವಚನವೇ ಅದಾಗಿರಬಹುದೆ?) ಆದ್ದರಿಂದಲೇ "ಅಂದಂದಿನುಚಿತಕ್ಕೆ ಗೀತವಮಂ ಪಾಡುತುಂ" ಎಂಬ ಮಾತಿನಲ್ಲಿ ಅವನು ಮಹಾದೇವಿಯಕ್ಕನ ಪದ್ಧತಿಯನ್ನು ಕೀರ್ತಿಸಿದ್ದಾನೆ.

ಇಷ್ಟೇ ಅಲ್ಲ. "ಗೀತ" ಗಳ ಹುರುಳು ಏನೆಂಬುದನ್ನು ಹರಿಹರನು ಕೆಲವು ಕಡೆಗಳಲ್ಲಿ ನಿರೂಪಿಸಿ ನಮಗೆ ಉಪಕಾರಮಾಡಿದ್ದಾನೆ. ಅವುಗಳನ್ನು ಇಲ್ಲಿ ಪರಿಶೀಲಿಸಬಹುದು. ಸ್ಪಷ್ಟವಾದ ಆಧಾರ ಈಗ ನಮಗೆ ದೊರೆಯತಕ್ಕದ್ದು ಈ ಕೆಳಗಿನ ಕಾವ್ಯಭಾಗಕ್ಕೆ. ಮಹಾದೇವಿ ಭಾಷೆ ಸಲ್ಲಿಸಿ ಹೊರಟುಬಂದ ಮೇಲೂ ಕೌಶಿಕನು ಅವಳನ್ನು ಬಿಟ್ಟಿರಲಾರದೆ, ಮತ್ತೆ ಒಲಿಸಿಕೊಳ್ಳುವ ಆಸೆಯಿಂದ ಶಿವಭಕ್ತನ ವೇಷ ತಾಳಿ ಬಂದ ಪ್ರಸಂಗದಲ್ಲಿ, ಆಕೆ ಈ ರೀತಿಯಾಗಿ ಹೇಳಿಕೊಂಡಳಂತೆ :

ಬಿಟ್ಟಪ್ಪೆನೆಂದೊಡಂ ಬಿಡದು ನಿನ್ನಯ ಮಾಯೆ
ಒಟ್ಟಯಿಸಿ ಬಂದಡೊಡವಂದಪ್ಪುದೀ ಮಾಯೆ
ಜೋಗಿಗಂ ಜೋಗಿಣಿಯುಪಾಯ್ತು ನಿನ್ನಯ ಮಾಯೆ
ರಾಗದಿಂ ಸವಣಂಗೆ ಕಂತಿಯಾಯ್ತೀ ಮಾಯೆ
ಭಗವಂಗೆ ಮಾಸಕಬ್ಬೆಯ ಚೋಹವಾಯ್ತಯ್ಯ
ಬಗೆವರಾರವರವರ್ಗೆ ಅವರಂದವಾ [ಯ್ತ] ಯ್ಯ
ಗಿರಿಯನೇಱಿದೊಡಿರದೆ ಗಿರಿಯನೇಱಿತು ಮಾಯೆ
ಪರಿದಡವಿಯಂ ಪೊಕ್ಕಡೊಡನೆ ಪೊಕ್ಕುದು ಮಾಯೆ
ಬೆನ್ನ ಕಯ್ಯಂ ಬಿಡದು ಬಾಪು ಸಂಸಾರವೇ
ಎನ್ನನಂಜಿಸಿತು ಮಝು ಬಾಪು ಸಂಸಾರವೇ
ಕರುಣಾಕರಾ ನಿನ್ನ ಮಾಯೆಗಂಜುವೆನಯ್ಯ
ಪರಮೇಶ್ವರಾ ಮಲ್ಲಿನಾಥ ಕರುಣಿಪುದಯ್ಯ

ಇನ್ನೇವೆನಿನ್ನೇವೆನೆಯ್ಯೋ ಮಹಾದೇವ
ಪನ್ನಗಾಭರಣ ಕರುಣಿಪುದೆಲೆ ಮಹಾದೇವ
ಎಂದು ವೈರಾಗ್ಯದಿಂದಂ ಗೀತವನುಂ ಪಾಡಿ
ಮುಂದಿರ್ದ ಕಾಮುಕನನತಿರೋಷದಿಂ ನೋಡಿ . . . .[19]

(vii. ೯೧ ಮುಂ.)

ಶ್ರೀಮರ್ಾ ಹಳಕಟ್ಟಿಯವರ ವಚನಸಂಕಲನದಲ್ಲಿ ದೊರೆಯುವ ಈ ಎರಡು ವಚನಗಳನ್ನು ಇದರೊಂದಿಗೆ ಹೋಲಿಸಬಹುದು :

ಬಿಟ್ಟೆನೆಂದರೆ ಬಿಡದೀ ಮಾಯೆ. ಬಿಡದಿದ್ದರೆ ಬೆಂಬತ್ತಿತ್ತು ಮಾಯೆ. ಯೋಗಿಗೆ ಯೋಗಿಣಿಯಾಯಿತ್ತು ಮಾಯೆ. ಸವಣಗೆ ಸವಣಿಯಾಯಿತ್ತು ಮಾಯೆ. ಯತಿಗೆ ಪರಾಕಿಯಾಯಿತ್ತು ಮಾಯೆ. ನಿನ್ನ ಮಾಯೆಗೆ ನಾನಂಜುವಳಲ್ಲ ಚನ್ನಮಲ್ಲಿಕಾರ್ಜುನದೇವ ನಿಮ್ಮಾಣೆ.

(ಪು. ೫—ಸಂ. ೧೫.)

ಕಲ್ಲ ಹೊಕ್ಕರೆ ಕಲ್ಲ ಬರಿಸಿದೆ. ಗಿರಿಯ ಹೊಕ್ಕರೆ ಗಿರಿಯ ಬರಿಸಿದೆ. ಭಾಪು ಸಂಸಾರವೆ! ಬೆನ್ನಿಂದ ಬೆನ್ನ ಹತ್ತಿ ಬಂದೆ. ಚನ್ನಮಲ್ಲಿಕಾರ್ಜುನಯ್ಯ ಇನ್ನೇವೆ ನಿನ್ನೇವೆ ?

(ಪು. ೩—ಸಂ. ೭.)

ಹರಿಹರನು ಹೇಳುವ ಗೀತಗಳು ಇವೇ ಆಗಿರಬೇಕಲ್ಲವೆ ? ಅವುಗಳ ಭಾವವನ್ನೇ ಅಲ್ಲದೆ ಮಾತುಗಳನ್ನೂ ಹಾಗೆಯೇ ಅವನು ಅನುವಾದ ಮಾಡಿದ್ದಾನೆ.[20] “ಕರುಣಾಕರಾ ನಿನ್ನ ಮಾಯೆಗಂಜುವೆನಯ್ಯ” ಎಂಬುದಕ್ಕೆ ಪ್ರತಿಯಾಗಿ ವಚನದಲ್ಲಿ “ನಿನ್ನ ಮಾಯೆಗೆ ನಾನಂಜುವಳಲ್ಲ” ಎಂದು ಇದೆ; ಹರಿಹರನ ಪಾಠದಂತೆಯೇ ಮೂಲವಚನವಿದ್ದಿತೋ ಏನೋ.

---

[19] ಶ್ರೀಮಾನ್ ಚೆನ್ನಮಲ್ಲಿಕಾರ್ಜುನರು ಸಂಪಾದಿಸಿ ಮುದ್ರಿಸಿರುವ ಪ್ರತಿಯಲ್ಲಿ ಈ ಭಾಗದಲ್ಲಿ ಕೆಲವು ಚರಣಗಳು ಪುನರುಕ್ತವಾಗಿರುವಂತೆ ತೋರುತ್ತದೆ. ಇಲ್ಲಿ ನಾವು ಮೈಸೂರು ಓರಿಯೆಂಟಲ್ ಲೈಬ್ರೆರಿಯ ‘ಶರಣರಗಳೆ’ ಎಂಬ ಪ್ರತಿಯ (K 358) ಪಾಠವನ್ನು ಮುಖ್ಯವಾಗಿ ಅನುಸರಿಸಿದ್ದೇವೆ. ಹರಿಹರನ ರಗಳೆಯಿಂದ ಮಿಕ್ಕ ಭಾಗಗಳನ್ನು ಉದ್ಧರಿಸುವಾಗಲೂ ಉಚಿತವಾದ ಕಡೆಗಳಲ್ಲಿ ಮೈಸೂರು ಪ್ರತಿಯ ಪಾಠವನ್ನೇ ಅಂಗೀಕರಿಸಿದ್ದೇವೆ.

[20] ಶ್ರೀಮಾನ್ ಕೆ. ಜಿ. ಕುಂದಣಗಾರರು ತಮ್ಮ ‘ಮಹಾದೇವಿಯಕ್ಕ’ ಎಂಬ ಗ್ರಂಥದ ಮುನ್ನುಡಿಯಲ್ಲಿ ಈ ಸಾಮ್ಯವನ್ನು ಗಮನಿಸಿದ್ದಾರೆ.

ಹರಿಹರನ ಕಾವ್ಯಕ್ಕೂ ಮಹಾದೇವಿಯಕ್ಕನ ವಚನಗಳಿಗೂ ಇಷ್ಟು ನಿಕಟವಾದ ಸಂಬಂಧವುಂಟೆಂದು ಅರಿತಮೇಲೆ "ಗೀತ" ಗಳ ಉಲ್ಲೇಖ ಹೀಗೆಯೇ ನಿರ್ದಿಷ್ಟವಾಗಿ ಅವನ ಕಾವ್ಯದಲ್ಲಿ ಮತ್ತೆಲ್ಲಾದರೂ ಕಾಣಬರುತ್ತದೆಯೇ ಎಂಬುದನ್ನು ನೋಡುವ ಕುತೂಹಲ ಸಹಜವಾಗಿ ಹುಟ್ಟುತ್ತದೆ. ಅಂಥ ಸ್ಥಳಗಳನ್ನು ಕೆಳಗೆ ಸಂಗ್ರಹಿಸಿ ಕೊಟ್ಟಿದೆ.

ಒಮ್ಮೆ ಮಹಾದೇವಿಯಕ್ಕನು ಶಿವಶರಣರ ಗೋಷ್ಠಿಯಲ್ಲಿರುವಾಗ ಸಂಜೆ ಕವಿಯುತ್ತದೆ; ಕೌಶಿಕರಾಜನ ಊಳಿಗದವರು ಅವಳನ್ನು ಕರೆಯಲು ಬರುತ್ತಾರೆ. ಆಗ ಅವಳು "ಮನವಲ್ಲದ ಮನದೊಳಂತಕ್ಕೆ ಮಾಹೇಶ್ವರರಂ ಮಹಮನೆಗೆ ಬಿಜಯಂಗೆಯ್ಯವೇಳ್ದು ಬಿನ್ನಪಂಗೆಯ್ದು ಕಱ್ಱನೆ ಕಂದಿ ಸುಱ್ಱನೆ ಸುಯ್ದು ಸುಮ್ಮಾನವುಡುಗಿ ನಡೆತಂದು—

> ದೇವಾ ಉಳಿವ ಕರೆವ ನೇಹವುಂಟೇ? ಸಂಸಾರಕ್ಕಂ ನಿಮ್ಮಲ್ಲಿ ಗೆಡೆಯಾಡುವ ಭಕ್ತಿಯುಂಟೇ? ಏನಯ್ಯಾ ಶಿವನೆ ಏನೆಂದು ಪೇಳ್ವೆನೀ ಲಜ್ಜೆಯ ಮಾತಂ—

ಎಂದು ಚೆನ್ನಮಲ್ಲಿಕಾರ್ಜುನಂಗೆ ಮೊಱೆಯಿಟ್ಟು ಮುಳಿದು ಗೀತಮಂ ಪಾಡಿ" ನಿರ್ವೇದದಿಂದ ಕೌಶಿಕನಲ್ಲಿಗೆ ಬರುತ್ತಾಳೆ.

ಇನ್ನೊಮ್ಮೆ ಮಾಹೇಶ್ವರಾರಾಧನೆಗೆ ಹತ್ತುಸಾವಿರ ಹೊನ್ನು ಬೇಕೆಂದು ಮಹಾದೇವಿ ಭಂಡಾರದ ಅಧಿಕಾರಿಗಳನ್ನು ಕೇಳಿದಾಗ ಅವರು—ಕೌಶಿಕ ರಾಜನು ವೈಹಾಳಿಯಲ್ಲಿದ್ದಾನೆ; ಅವನಿಗೆ ಅರಿಕೆ ಮಾಡಿದಲ್ಲದೆ ಕೊಡಲು ಶಕ್ಯವಿಲ್ಲ—ಎಂದು ಹೇಳಲು, ಈ ಅಭಿಮಾನಶಾಲಿನಿ ಮನಗುಂದಿ ತನ್ನ ಆಭರಣಗಳನ್ನೇ ಮಾಹೇಶ್ವರರಿಗೆ ಅರ್ಪಿಸಿ ಕಳಿಸಿಕೊಟ್ಟು, ಬಳಿಕ ಅನುತಾಪದಿಂದ—

> "ದೇವಾ ಶಿವಲಾಂಛನವನೇಱಿಸಿಕೊಂಡು ಮನೆಗೆ ಬಂದವರಂ ಕಡೆಗಣಿಸಿ ಎಂತು ನೋಡುತಿರ್ಪೆನವರ್ಗೆ ಸತ್ಕಾರಮಂ ಮಾಡಲಿಲ್ಲದಿರ್ದೊಡೆನ್ನನೀ ಧರೆಯಮೇಲಿರಿಸುವ ಕಾರಣವೇನಭವಾ?? ನಿನ್ನವಳೆಂದೆನ್ನ ಮುದ್ದುತನವಂ ಸಲಿಸುವೊಡಿರಿಸುವುದಿಲ್ಲಾ ಕೈಲಾಸಕ್ಕೆ ಕೊಂಡೊಯ್ವುದು—

ಎಂದು ಚೆನ್ನಮಲ್ಲಿಕಾರ್ಜುನಂಗೆ ಗೀತಮಂ ಪಾಡುತಿಪ್ಪ ಸಮಯದೊಳು" ಕೌಶಿಕನು ಹಿಂದಿರುಗಿ ಬಂದು ನಡೆದ ವೃತ್ತಾಂತವನ್ನು ಕೇಳಿ ಭಂಡಾರಿಗಳನ್ನು

ಜರೆದು ಬೀಗದಕೈಯನ್ನೇ ಮಹಾದೇವಿಗೆ ಒಪ್ಪಿಸಿಕೊಡುತ್ತಾನೆ.

ಮುಂದೆ, ಕೌಶಿಕನ ಮೂರು ತಪ್ಪುಗಳೂ ಸಂದಮೇಲೆ, ಮಹಾದೇವಿಯಕ್ಕನು ಬದುಕಿದೆನೆಂದು ಹರ್ಷಿಸಿ, ತಂದೆತಾಯಿಗಳನ್ನು ಬೀಳ್ಕೊಂಡು ಗುರುವಿನ ಅನುಜ್ಞೆಯನ್ನು ಪಡೆದು,

> "ಅಶನದಾಸೆಯುಂ ತೃಷೆಯ ತೃಷ್ಣೆಯುಂ ಬೆಸನದ ಬೇಗೆಯುಂ ವಿಷಯದ ವಿಹ್ವಳತೆಯುಂ ತಾಪತ್ರಯದ ಕಲ್ಪನೆಗಳಂ ಗೆಲಿದೆನಿನ್ನೇ ನೆನ್ನಿಚ್ಛೆಯಾದುದು ; ಚೆನ್ನಮಲ್ಲಿಕಾರ್ಜುನ ನಿನಗಂಜೆನಂಜೆಂ—

ಎಂದು **ಗೀತವುಂ ಪಾಡಿ**" ವೈರಾಗ್ಯನಿಧಿಯಾಗಿ ಶ್ರೀಶೈಲವನ್ನು ಕುರಿತು ಹೊರಡುತ್ತಾಳೆ.

ಈ ಮೂರು ಕಡೆಗಳಲ್ಲೂ ಮಹಾದೇವಿ ಹಾಡಿದ ಗೀತದ ವಿಷಯವೇನೆಂಬುದನ್ನು ಹರಿಹರನು ಸ್ಪಷ್ಟವಾಗಿ ಕೊಟ್ಟಿದ್ದಾನೆ. ಇವಕ್ಕೆ ಆಧಾರವಾಗಿ ನಿಜವಾದ ವಚನಗಳೇ ಇದ್ದಿರಬೇಕೆಂದು ಅವನ ಪದ್ಧತಿಯನ್ನರಿತವರಿಗೆ ಮನವರಿಕೆಯಾಗದಿರದು. ಈ ಮೂರು ಬಂದಿರುವುದೂ ಹರಿಹರನ ಕಾವ್ಯದ ಆರನೆಯ ಸ್ಥಲದಲ್ಲಿ—ಮಹಾದೇವಿಯಕ್ಕನು ಕೌಶಿಕನ ಸಂಗಡ ಒಲ್ಲದ ಸಂಸಾರವನ್ನು ನಡಸುತ್ತಿದ್ದ ಸಂದರ್ಭದಲ್ಲಿ—ಎಂಬುದನ್ನು ಗಮನಿಸಬೇಕು.

ಇನ್ನೊಂದು ಉಲ್ಲೇಖವುಂಟು. ಅದು ಈ ರಗಳೆಯ ಐದನೆಯ ಸ್ಥಲದಲ್ಲಿ, ಮಹಾದೇವಿಯ ನಿರ್ಭರ ಶಿವಪೂಜೆಯನ್ನು ವರ್ಣಿಸುವೆಡೆಯಲ್ಲಿ ಬರುತ್ತದೆ :

> ಗೀತದೊಳಗೆ ನೂತ್ನಭಕ್ತಿ ಜಾತವಾಗಲೋತು ಪಾಡಿ
> ಗೀತದೊಳಗೆ [ಶ]ರ್ವನಱಿವು ತೆಱಹುಗುಡದೆ ತೀವಿ ಪಾಡಿ
> ಭಕ್ತಿರಸದ ನದಿಯ ನಡುವೆ ಗೀತವುಣ್ಮಿ ಪೊಣ್ಮೆ ಪಾಡಿ
> ಭಕ್ತಿಯೊಳ್ ವಿರಕ್ತಿ ನೆಲಸಿ ಮುಕ್ತಿ ಮುಂದುದೋಱೆ ಪಾಡಿ
> ಒಲಿದು ಪಾಡಿ ಉಲಿದು ಪಾಡಿ ಮಲೆದು ಪಾಡಿ ಬಲಿದು ಪಾಡಿ
> ಸಲುಗೆಯಿಂದ ಗೆಲಿದು ಪಾಡಿ ಪುಳಕವಡರೆ ನೋಡಿ ಪಾಡಿ—
> ದೇವ ಎನಗೆ ಭವಿಯ ಸಂಗವೆಂದು ಮಾಣ್ಬುದೆನ್ನ ತಂದೆ
> ದೇವ ಬೆರಕೆಯಿಲ್ಲದಚ್ಚ ಭಕುತಿಸುಖವದೆಂದು ತಂದೆ
> ಪೂಜೆಯೊಳಗೆ ಮೆಚ್ಚಿ ಬೆಚ್ಚ ಮನವನೆಂತು ತೆಗೆವೆನಯ್ಯ

ಪೂಜೆಯೊಳಗೆ ನಟ್ಟ ದಿಟ್ಟಗಳನದೆಂತು ಕೀಳ್ವೆನಯ್ಯ
—ಎನುತವರ್ಚಿಸುತ್ತುವಲ್ಲಿ ಅಗಲಲಾಜಿದಾಲಿಸುತ್ತೆ . . . .

(v. ೧೪೯ ಮುಂ.)

ಇಲ್ಲಿ, ಗೀತವನ್ನು ಹಾಡಿದಳೆಂಬ ಉಕ್ತಿ ಮಿಕ್ಕ ಕಡೆಗಳಲ್ಲಿರುವಂತೆ ಅನುವಾದದ ಕೊನೆಯಲ್ಲಿ ಬಾರದೆ ಅದಕ್ಕೆ ಅವತರಣಿಕೆಯಾಗಿ ಮೊದಲೇ ಬಂದಿದೆ; ಇಷ್ಟೇ ವಿಶೇಷ. ಇದಕ್ಕೂ ಮಹಾದೇವಿಯಕ್ಕನ ವಚನವೊಂದು ಆಧಾರವಾಗಿರುವುದು ಅಸಂಭವವಲ್ಲ. "ದೇವ ಎನಗೆ ಭವಿಯ ಸಂಗವೆಂದು ಮಾಣ್ಬುದೆನ್ನ ತಂದೆ"—ಎಂಬ ಮಾತನ್ನು ಇಲ್ಲಿ ಮುಖ್ಯವಾಗಿ ಲಕ್ಷಿಸಬೇಕು. ಇದು ಮೂಲವಚನದಲ್ಲಿಯೇ ಕಾಣಿಸಿಕೊಂಡಿದ್ದ ಪಕ್ಷದಲ್ಲಿ ಮಹಾದೇವಿಯಕ್ಕನ ಮದುವೆಯ ಸಮಸ್ಯೆ ಬಗೆಹರಿದಂತೆಯೇ ಸರಿ.

ಹರಿಹರನು ವೀರಶೈವ ಪುರಾಣಕಾರರಲ್ಲಿ ಮೊದಲನೆಯವನು. ಕ್ರಿ. ಶ. ಹನ್ನೆರಡನೆಯ ಶತಮಾನದಲ್ಲಿ ಮಹಾದೇವಿಯಕ್ಕ, ಬಸವಣ್ಣ ಮೊದಲಾದವರ ಸಮಕಾಲಿಕನಾಗಿ ಜೀವಿಸಿದ್ದನೇ ಎಂಬುದು ಚರ್ಚಾಸ್ಪದವಾದ ವಿಷಯ; ಹದಿಮೂರನೆಯ ಶತಮಾನದ ಪೂರ್ವಾರ್ಧಕ್ಕಿಂತ ಈಚಿನವನಲ್ಲವೆಂಬುದೇನೋ ನಿಸ್ಸಂದೇಹ. ಆ ವೇಳೆಗೆ ಇನ್ನೂ ಈ ಶಿವಶರಣರ ಅನೇಕ ವಚನಗಳು ಜನರ ನಾಲಗೆಗಳಲ್ಲಿ ನಲಿದು ಕಿವಿಗಳಲ್ಲಿ ಝೇಂಕರಿಸುತ್ತಿದ್ದಿರಬೇಕು; ಅವು ಉದಿಸಿದ ಸಂದರ್ಭವೇನೆಂಬುದು ವೃದ್ಧರಿಗೆ ಗೊತ್ತಿದ್ದಿರಬೇಕು. ಹರಿಹರನು ತನ್ನ ಕಾವ್ಯ ರಚನೆಯಲ್ಲಿ ಇವನ್ನೆಲ್ಲಾ ಉಪಯೋಗಿಸಿಕೊಂಡಿದ್ದಾನೆ. ಅವನು ಕವಿ; ಹಿಂದಿನವರ ವಚನಗಳನ್ನು ಎಲ್ಲ ಕಡೆಗಳಲ್ಲೂ ಅಕ್ಷರಶಃ ಅನುವಾದ ಮಾಡಿರಲಾರನು. ಆದರೆ, ಇಂಥ ಗೀತವನ್ನು ಮಹಾದೇವಿ ಹಾಡಿದಳೆಂದು ಅವನು ಬಾಯಿಬಿಟ್ಟು ಹೇಳಿರುವ ಮೇಲಿನ ಕಡೆಗಳಲ್ಲಾದರೂ ಆಯಾ ಮೂಲವಚನದ ತಿರುಳನ್ನೂ ಹಲವು ಮಾತುಗಳನ್ನೂ ಉಳಿಸಿಕೊಟ್ಟಿದ್ದಾನೆಂದು ನಾವು ನಂಬಬಹುದು. ಕನ್ನಡನಾಡಿನ ಮೂಲೆಮೂಲೆಗಳಲ್ಲಿ ಅಡಗಿ ಇನ್ನೂ ಬೆಳಕಿಗೆ ಬಾರದಿರುವ ವಚನಸಂಗ್ರಹಗಳಲ್ಲಿ ಹರಿಹರನ ಅನುವಾದಗಳಿಗೆ ಸಂವಾದಿಯಾದ ವಚನಗಳು ದೊರೆಯುತ್ತವೆಯೋ ಎಂಬುದರ ಶೋಧನೆ ಚೆನ್ನಾಗಿ ನಡೆಯಬೇಕಾಗಿದೆ.

೬

ಮಹಾದೇವಿಯಕ್ಕ, ಬಸವಣ್ಣ ಮೊದಲಾದವರ ವಚನಗಳನ್ನು ಹರಿಹರನು "ಗೀತ" ಗಳೆಂದು ಕರೆದಿದ್ದಾನೆ; ಅವುಗಳನ್ನು ಹಾಡುತ್ತಿದ್ದರೆಂದು ಹೇಳಿದ್ದಾನೆ.[21] ಇವರ ಅನೇಕ ವಚನಗಳಲ್ಲಿ ಒಂದು ಬಗೆಯ ಲಯಬದ್ಧತೆಯೇನೋ ಸ್ಫುಟವಾಗಿ ಗೋಚರಿಸುತ್ತದೆ. ಇವುಗಳ ಧಾಟಿ ಪದ್ಯದಷ್ಟು ಬಿಗಿಯಲ್ಲ, ಸಾಮಾನ್ಯಗದ್ಯದಷ್ಟು ಸಡಿಲವೂ ಅಲ್ಲ. ಈ "ವಚನ" ಗಳಲ್ಲಿ ಎಷ್ಟು ನಿಜವಾಗಿಯೂ ಹಾಡಿನ ಪೂರ್ಣ ಲಕ್ಷಣವನ್ನು ಒಳಕೊಂಡಿದ್ದುವು ; ಎಷ್ಟನ್ನು ರಾಗದ ಛಾಯೆ ಮಾತ್ರ ತೋರಿಸಿ ವಾಚಿಸುತ್ತಿದ್ದರು ಎಂಬುದು ಇನ್ನೂ ನಿಷ್ಕರ್ಷೆಯಾಗಿಲ್ಲ. ಆದರೂ ಈಗ ವಚನ ವೆಂದು ಕರೆಯಿಸಿಕೊಳ್ಳುತ್ತಿರುವವುಗಳಲ್ಲಿ ಕೆಲವಾದರೂ ಮೊದಲಿಗೆ ಸಲಕ್ಷಣ ವಾದ ಹಾಡುಗಳಾಗಿದ್ದಂತೆಯೇ ತೋರುತ್ತದೆ. ಇದಕ್ಕೆ ಒಂದು ನಿದರ್ಶನವನ್ನು ಕೊಡಬಹುದು :

> ಪಚ್ಚೆಯ ನೆಲಗಟ್ಟು, ಕನಕದ ತೋರಣ, ವಜ್ರದ ಕಂಭ, ಪವಳದ ಚಪ್ಪರ ವನಿಕ್ಕಿ ಮುತ್ತುಮಾಣಿಕದ ಮೇಲುಕಟ್ಟ ಕಟ್ಟಿ, ಮದುವೆಯ ಮಾಡಿದರು, ನಮ್ಮವರೆನ್ನ ಮದುವೆಯ ಮಾಡಿದರು. ಕಂಕಣ ಕೈದಾರ ಸ್ಥಿರಸೇಸೆಯನಿಕ್ಕಿ ಚನ್ನಮಲ್ಲಿಕಾರ್ಜುನನೆಂಬ ಗಂಡಗೆನ್ನ ಮದುವೆಯಮಾಡಿದರು.

ಇದು ಶ್ರೀಮರ್ಾ ಹಳಕಟ್ಟೆಯವರ ಸಂಕಲನದಲ್ಲಿದೆ (ಪು. ೮–ಸಂ. ೬) ; ಕೆಲವು ಪಾಠಭೇದಗಳೊಡನೆ ಶೂನ್ಯಸಂಪಾದನೆಯ ಎರಡು ಪ್ರತಿಗಳಲ್ಲೂ,[22] ಹಿಂದೆ ನಾವು ಉದಾಹರಿಸಿರುವ ವಚನಸಾರದಲ್ಲೂ ದೊರೆಯುತ್ತದೆ. ಇಲ್ಲೆಲ್ಲಾ ಇದೊಂದು ವಚನ ಮಾತ್ರವಾಗಿದೆ. ಹಲಗೆಯದೇವರ ಶೂನ್ಯಸಂಪಾದನೆಯ ಪ್ರತಿಯಲ್ಲಾದರೆ ಈ ರೀತಿಯಾಗಿ ಅದನ್ನು ಕೊಟ್ಟದ್ದಾರೆ :

---

[21] ಸಿದ್ಧರಾಮನ ವಚನಗಳನ್ನು ಶಿಷ್ಯರು ರಾಗಬದ್ಧವಾಗಿ ಹಾಡುತ್ತಿದ್ದರೆಂದು ರಾಘವಾಂಕನು ಹೇಳಿರುವುದನ್ನೂ ಇಲ್ಲಿ ಗಮನಿಸಬಹುದು : "ಹಾಡುತಿರ್ದರು ಗುಡ್ಡ ರೊಲಿದು ಗುರುವಿನ ವಚನಮಂ ಶುದ್ಧಭೈರವಿಯಲಿ" (ಸಿದ್ಧರಾಮಚಾರಿತ್ರ, viii. ೬೨)

[22] ಸಿದ್ಧಲಿಂಗಯತಿ, ಸಿದ್ಧವೀರಣಾರ್ಯ—ಇವರ ಪ್ರತಿಗಳು

ರಾಗ ಕಾಂಬೋಧಿ ॥

ಪಲ್ಲವ ॥ ಎಮ್ಮವರೆನ್ನ ಮದುವೆಯ ಮಾಡಿದರು
ಲಿಂಗಕ್ಕೆನ್ನ ಮದುವೆಯ ಮಾಡಿದರು ॥

ಪಚ್ಚೆಯ ನೆಲಗಟ್ಟು ಕನಕದ ತೋರಣ
ವಜ್ರದ ಕಂಭ ಮಾಣಿಕದ ಚಪ್ಪರವಿಕ್ಕಿ
ಮದುವೆ ॥ ೧ ॥

ಬಸವ ಬಂದಿಗಟ್ಟಿ ಸಂಗಯ್ಯ ಮದವಣಿಗ
ಅನು ಮು[ತ್ತೈ]ದೆ ಶರಣರು ದಿಬ್ಬಣಿಗರು ॥೨॥
ಕಂಕಣ ಕೈದಾರೆಗಟ್ಟ[23] ಸ್ಥಿರಸೇಸೆಯನಿಟ್ಟು
ಚೆನ್ನಮಲ್ಲಿಕಾರ್ಜುನನೆಂಬ ಗಂಡನಿಗೆನ್ನ
ಮದುವೆಯ ಮಾಡಿದರು ॥೩॥[24]

ಪದ ಸಹ ವಚನ ॥

ಇಲ್ಲಿ ರಾಗದ ಹೆಸರನ್ನು ಹೇಳಿ ಪಲ್ಲವಿಯನ್ನು ಪ್ರತ್ಯೇಕವಾಗಿ ಕೊಟ್ಟು ಕೊನೆಯಲ್ಲಿ "ಪದ" ವೆಂದು ಕರೆದಿರುವುದು ಗಮನಿಸತಕ್ಕ ವಿಷಯ. ಮಹಾದೇವಿಯಕ್ಕನು ಇದನ್ನು ಮೊದಲಿಗೆ ಹಾಡಾಗಿಯೇ ಕಟ್ಟಿದಳೆಂದು ಕಾಣುತ್ತದೆ. ಅಲ್ಲಿಂದೀಚೆಗೆ ಅದು ಸಾಮಾನ್ಯ ವಚನಗಳೊಡನೆ ಬೆರೆದು ಹೋಗಿರಬೇಕು. ಮಹಾದೇವಿಯಕ್ಕನ ಇಂಥ ಪದಗಳು ಇನ್ನೂ ಕೆಲವು ಉಂಟು. ಅವುಗಳ ಶೋಧನೆ ಮುಂದುವರಿಯಬೇಕು.

ಇನ್ನೊಂದು ಮಾತು. ಮಹಾದೇವಿಯಕ್ಕನ ವಚನಗಳ ವಿಚಾರ ಮಾಡುವಾಗ ಅದನ್ನು ಹೇಳಿದರೂ ಒಟ್ಟು ವಚನವಾಙ್ಮಯಕ್ಕೇ ಅನ್ವಯಿಸತಕ್ಕದ್ದು. ಅನೇಕ ವಚನಗಳು ಒಂದು ಖಚಿತವಾದ ಪಾಠದಲ್ಲಿ ನಮಗೆ ದೊರೆಯುವುದಿಲ್ಲ; ಬೇರೆ ಬೇರೆ ಮಾತೃಕೆಗಳಲ್ಲಿ ಅವು ಬೇರೆ ಬೇರೆ ರೂಪಗಳನ್ನು ತಾಳುತ್ತವೆ. ಇದಕ್ಕೆ ನಿದರ್ಶನಗಳನ್ನು ಈ ಲೇಖನದಲ್ಲೇ ತಕ್ಕಮಟ್ಟಿಗೆ ಕಂಡಿದ್ದೇವೆ. ಇದರ

---

[23] ಇಲ್ಲಿ "ಕೈದಾರೆ" ಎಂದಿಷ್ಟೇ ಇರಬೇಕಲ್ಲವೆ?" "ಗಟ್ಟ" ಎಂಬುದೂ ಸೇರಿದರೆ ಪದ್ಯ ಕೆಡುತ್ತದೆ.

[24] ಇಲ್ಲಿ ಒಂದನೆಯ ಮತ್ತು ಮೂರನೆಯ ನುಡಿಗಳ ಕೊನೆಯಲ್ಲಿ ಲಿಪಿಕಾರನು ಪಲ್ಲವಿಯ ಕೆಲಕೆಲವು ಮಾತುಗಳನ್ನು ಸೇರಿಸಿರುವಂತೆ ತೋರುತ್ತದೆ. ಅಚ್ಚು ಮಾಡುವಾಗ ಅವುಗಳನ್ನು ಪ್ರತ್ಯೇಕಿಸಿ ಕೊಡಲಾಗಿದೆ.

ಮೇಲೆ, ಹಿಂದಿನವರ ಅಂಕಿತಗಳನ್ನೇ ಉಪಯೋಗಿಸಿಕೊಂಡು ಹೊಸ ವಚನಗಳನ್ನು ಕಟ್ಟುವುದು ಸುಲಭ; ಮಿಕ್ಕ ಮತಗಳ ಪೂಜ್ಯಗ್ರಂಥಗಳಲ್ಲೂ ಸಾಹಿತ್ಯದಲ್ಲೂ ಈ ಬಗೆಯ ಪ್ರಕ್ಷೇಪಗಳು ಆಗಿರುವುದಕ್ಕೆ ಬೇಕಾದಷ್ಟು ಉದಾಹರಣೆಗಳಿರುವಾಗ ವೀರಶೈವ ಮತದಲ್ಲಿ ಅದು ನಡೆದಿಲ್ಲವೆಂದು ಶಪಥಮಾಡುವುದು ಹೇಗೆ? ಇದಲ್ಲದೆ, ಒಂದೇ ವಚನವನ್ನು ಅಂಕಿತದಲ್ಲಿ ವ್ಯತ್ಯಾಸಮಾಡಿ ಬೇರೆ ಬೇರೆ ವಚನಕಾರರಿಗೆ ಆರೋಪಿಸಿರುವುದೂ ಉಂಟು.[25] ವಚನವಾಙ್ಮಯವನ್ನು ಶಾಸ್ತ್ರೀಯ ರೀತಿಯಲ್ಲಿ ಪರೀಕ್ಷಿಸಿ, ವಿಮರ್ಶಿಸಿ, ಅದರಲ್ಲಿರುವ ಪ್ರಕ್ಷೇಪಗಳನ್ನೂ ತಿದ್ದುಪಾಡುಗಳನ್ನೂ ಅಸಂಗತಗಳನ್ನೂ ನಿರ್ಧರಿಸಬೇಕು; ವಚನಗಳ ಶುದ್ಧ ಪಾಠವನ್ನು ಆಧಾರಸಹಿತವಾಗಿ ಪ್ರಕಟಿಸಬೇಕು. ಇದಕ್ಕಾಗಿ ಎಲ್ಲ ಆಕರಗಳನ್ನೂ ಉಪಯೋಗಿಸಿಕೊಳ್ಳಬೇಕು.[26] ಈ ಕಾರ್ಯವು ಸಮರ್ಪಕವಾಗಿ ನಡೆದು, ಮಹಾದೇವಿಯಕ್ಕನ ವಚನಗಳ ಭಾಷೆ ಶೈಲಿಗಳು, ಅವಳ ವ್ಯಕ್ತಿತ್ವ ಜೀವನವೃತ್ತಾಂತ

---

[25] ಉದಾಹರಣೆಗೆ, ಶ್ರೀಮಾನ್ ಹಳಕಟ್ಟಿಯವರ ಸಂಕಲನದಲ್ಲಿ "ಊರ ಸೀರೆಗೆ ...." (ಪು. ೩–ಸಂ. ೬) ಎಂಬುದು ಮಹಾದೇವಿಯಕ್ಕನ ಅಂಕಿತದೊಡನೆ ಬಂದಿದೆ; ಇದೇ ವಚನವೇ ಬಸವಣ್ಣನ ಅಂಕಿತದಲ್ಲೂ ಸಿಕ್ಕುತ್ತದೆ (ಬಸವೇಶ್ವರನ ವಚನಗಳು, ಪು. ೪೬–ಸಂ. ೬೦). ಇದು ಮೂಲತಃ ಬಸವಣ್ಣನ ವಚನವೇ ಆಗಿರಬೇಕು; ತಾನೇ ಹೆಣ್ಣಾಗಿರುವ ಮಹಾದೇವಿಯಕ್ಕನು "ಹೊನ್ನೆನ್ನದು, **ಹೆಣ್ಣೆನ್ನದು** ...." ಎಂದು ನೆನೆದಿರಲಾರಳು.

ಹೀಗೆಯೇ, "ಸಜ್ಜನ**ನಾಗಿ** ಮಜ್ಜನಕ್ಕೆರೆವೆ, ಶಾಂತ**ನಾಗಿ**...." ಎಂಬ ವಚನದ ಪಾಠವನ್ನು ನೋಡಿದರೆ (ಪು. ೧೫–ಸಂ. ೭) ಅದು ಯಾರೋ ಗಂಡಸಿನ ಮಾತೆಂದು ತೋರುತ್ತದೆ.

"ಅಯ್ಯಾ ಆದಿ ಅನಾದಿಯಿಂದತ್ತತ್ತ. . . ." ಎಂಬುದು (ಪು. ೬–ಸಂ. ೧೯) ನಿಜವಾಗಿ ಘಟ್ಟಿವಾಳಯ್ಯನ ವಚನ; "ಚಿಕ್ಕಯ್ಯಪ್ರಿಯ ಸಿದ್ಧಲಿಂಗ" ಎಂಬ ಅಪರ ಅಂಕಿತದಿಂದ ಇದು ಸ್ಪಷ್ಟವಾಗುತ್ತದೆ. ಇದರಲ್ಲಿ ವಚನಕಾರನು "ಚನ್ನಮಲ್ಲಿಕಾರ್ಜುನನರ್ಧಾಂಗಿನಿ" ಯನ್ನು ಸಂಬೋಧಿಸಿದ್ದಾನೆ; ಅಷ್ಟೇ.

[26] 'ಮಹಾದೇವಿಯಕ್ಕನ ಸಾಂಗತ್ಯ' ವೆಂಬ ಗ್ರಂಥದಲ್ಲಿ ಆಕೆಯ ಏಳು ವಚನಗಳು 'ಗಿರಿಮಲ್ಲಿಕಾರ್ಜುನ' ಎಂಬ ಅಂಕಿತದೊಡನೆ ದೊರೆಯುವುವೆಂಬುದನ್ನು ಶ್ರೀಮಾನ್ ರಂ. ಶ್ರೀ. ಮುಗಳಿಯವರು ಪರಿಶೋಧಿಸಿರುವ ಅಂಶವನ್ನು ಇಲ್ಲಿ ಸ್ಮರಿಸಬಹುದು ('ಶರಣಸಾಹಿತ್ಯ', ಸಂ. ೧, ಪು. ೩೫೨–೩).

ಗಳು—ಇವನ್ನೆಲ್ಲಾ ಕುರಿತು ಅಭಿಪ್ರಾಯಗಳನ್ನು ಹೂಡುವುದಕ್ಕೆ ಭದ್ರವಾದ ನೆಲಗಟ್ಟು ಬೇಗ ಸಿದ್ಧವಾಗಲಿ.

## ಪರಿಶಿಷ್ಟ

ಈ ಲೇಖನ ಮೊದಲಬಾರಿ ಮುದ್ರಿತವಾದೀಚೆಗೆ ಶ್ರೀವರ್ಾ ಹಳಕಟ್ಟಿಯವರು ಪ್ರಕಟಿಸಿರುವ 'ಮಹಾದೇವಿಯಕ್ಕನ ವಚನಗಳ' ಅವೃತ್ತಿಗಳಲ್ಲಿ (೧ನೆಯ ಆವೃತ್ತಿ : ೧೯೪೨ ; ೫ನೆಯ ಆವೃತ್ತಿ : ೧೯೪೪), ಅವರೇ ಸೂಚಿಸಿರುವಂತೆ, ನಾಲ್ಕು ವಚನಗಳು ಹೆಚ್ಚಾಗಿ ಸೇರಿವೆ. ಇವೆಲ್ಲವೂ ನಮ್ಮ ಲೇಖನದಲ್ಲಿ ಆಗಲೇ ಉದ್ಧೃತವಾಗಿರತಕ್ಕವು.

* * *

ಈಚೆಗೆ ಶ್ರೀವರ್ಾ ಎಚ್. ದೇವೀರಪ್ಪನವರು 'ಮಹಾದೇವಿ—ಕೌಶಿಕ' ಎಂಬ ಲೇಖನವನ್ನು ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ 'ಸಾಹಿತ್ಯ ಸಮಿತಿ ಪತ್ರಿಕೆ' ಯಲ್ಲಿ ಪ್ರಕಟಿಸಿದ್ದಾರೆ (೫, ೨, ೩ : ಆಗಸ್ಟ್, ನೊವಂಬರ್ ೧೯೪೫). ಈ ಲೇಖನದ ಕೊನೆಯಲ್ಲಿ, ತೀರ್ಥಹಳ್ಳಿಯ ತಾಲ್ಲೂಕು ಕವಿಲೆದುರ್ಗದ ಮಹಾಮಹಂತಿನ ಮಠದ ಸ್ವಾಮಿಗಳು ತಮಗೆ ಕೊಟ್ಟ ಓಲೆಗರಿಯ ಪ್ರತಿಯಲ್ಲಿದ್ದ ಮಹಾದೇವಿಯಕ್ಕನ ೨೩ ವಚನಗಳನ್ನು ಮುದ್ರಿಸಿ ಉಪಕಾರಮಾಡಿದ್ದಾರೆ. (ಇವುಗಳಲ್ಲಿ ಕೆಲವು ಅವರ ಲೇಖನದೊಳಗೂ ಉಚಿತವಾದ ಕಡೆಗಳಲ್ಲಿ ಉದಾಹೃತವಾಗಿವೆ.) ಈ "ವಚನಗಳಲ್ಲಿ ಒಂಬತ್ತು ಮಾತ್ರ ಹಳಕಟ್ಟಿಯವರು ಸಂಪಾದಿಸಿರುವ ಗ್ರಂಥದಲ್ಲಿ ದೊರೆಯುತ್ತವೆ"; ಮಿಕ್ಕವು ಪ್ರಕಟವಾಗುವುದಕ್ಕೆ ಇದೇ ಮೊದಲು. ಈ "ಹೊಸ" ವಚನಗಳಲ್ಲಿ ಮಹಾದೇವಿಯಕ್ಕನ ಆತ್ಮಕಥೆಯ ದೃಷ್ಟಿಯಿಂದ ಗಮನಾರ್ಹವೆಂದು ತೋರಿದ ಮೂರನ್ನು ಕೆಳಗೆ ಎತ್ತಿಕೊಟ್ಟಿದೆ:

ಎಮ್ಮೆಗೊಂದು ಚಿಂತೆ, ಸಮಗಾರಗೊಂದು ಚಿಂತೆ ; ಧರ್ಮಿಗೊಂದು ಚಿಂತೆ, ಕರ್ಮಿಗೊಂದು ಚಿಂತೆ, ನನಗೆ ನನ್ನ ಚಿಂತೆ. ತನಗೆ ತನ್ನ ಕಾಮದ ಚಿಂತೆ. ಒಲ್ಲೆ ಹೋಗು ಸೆಱಗ ಬಿಡು ಮರುಳೆ ! ನನಗೆ ಚೆನ್ನಮಲ್ಲಿಕಾರ್ಜುನ ದೇವರು ಒಲಿಯರೊ ಒಲಿವರೋ ಎಂಬ ಚಿಂತೆ ॥೮॥

ಕೈಸಿರಿಯ ದಂಡವ ಕೊಳ್ಳಬಹುದಲ್ಲದೆ ಮೈಸಿರಿಯ ದಂಡವ ಕೊಳಲುಂಟೆ? ಉಟ್ಟಂತ ಉಡಿಗೆತೊಡಿಗೆಯನೆಲ್ಲ ಸೆಳೆದುಕೊಳ್ಳಬಹುದಲ್ಲದೆ ಮುಚ್ಚಿ ಮುಸುಕಿರ್ದ ನಿರ್ವಾಣವ ಸೆಳೆದುಕೊಳ್ಳಬಹುದೆ? ಚೆನ್ನಮಲ್ಲಿಕಾರ್ಜುನದೇವರ ಬೆಳಗನುಟ್ಟು ಲಜ್ಜೆಗೆಟ್ಟವಳಿಗೆ ಉಡಿಗೆ ತೊಡಿಗೆಯ ಹಂಗೇಕೊ ಮರುಳೆ ‖ ೯ ‖

ಇಹಕೊಬ್ಬ ಗಂಡನೆ? ಪರಕೊಬ್ಬ ಗಂಡನೆ? ಲೌಕಿಕಕ್ಕೆ ಒಬ್ಬ ಗಂಡನೆ, ಪರಮಾರ್ಥಕ್ಕೆ ಒಬ್ಬ ಗಂಡನೆ? ನನ್ನ ಗಂಡ ಚೆನ್ನಮಲ್ಲಿ ಕಾರ್ಜುನ ದೇವರಲ್ಲದೆ ಮಿಕ್ಕಿನ ಗಂಡರೆಲ್ಲ ಮುಗಿಲ ಮಱೆಯ ಮಣ್ಣ ಬೊಂಬೆಗಳು ‖ ೧೨ ‖

ಹರಿಹರನು ಚಿತ್ರಿಸಿರುವ ಕಥೆಗೆ ಈ ವಚನಗಳು ಚೆನ್ನಾಗಿ ಹೊಂದಿಕೊಳ್ಳುತ್ತವೆಯಲ್ಲವೆ!

ಶ್ರೀಮಾನ್ ದೇವೀರಪ್ಪನವರು ತಮ್ಮ ಲೇಖನದಲ್ಲಿ ಒಂದು ಕಡೆ—

ಒಲುಮೆ ಒಚ್ಚತವಾದವರು ಕುಲಛಲವನಱಸುವರೆ? ಮರುಳು ಗೊಂಡವರು ಲಜ್ಜೆನಾಚಿಕೆಯ ಬಲ್ಲರೆ? ಚೆನ್ನಮಲ್ಲಿಕಾರ್ಜುನಗೊಲಿದವರು ಲೋಕಾಭಿ ಮಾನವ ಬಲ್ಲರೆ ಮರುಳೆ

ಎಂಬ ಇನ್ನೊಂದು "ಹೊಸ" ವಚನವನ್ನು ಉದಾಹರಿಸಿ, "ಹೊಸದಾಗಿ ದೊರೆ ತಿರುವ ಒಂದು ಕಡತದಿಂದ" ಎಂದು ಅದರ ಆಕರವನ್ನು ನಿರ್ದೇಶಿಸಿದ್ದಾರೆ. ವಿಚಾರಮಾಡಿದ್ದರಲ್ಲಿ, ಈ ಕಡತ ಅವರ ಮಿತ್ರರೊಬ್ಬರದೆಂದು ಗೊತ್ತಾಗುತ್ತದೆ.

* * *

ಮದರಾಸು ಸರ್ಕಾರದ ಓರಿಯೆಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರೆರಿಯವರು ಭಾಗಶಃ ಪ್ರಕಟಿಸುತ್ತಿರುವ 'A Descriptive Catalogue of the Kannada Manuscripts' ಎಂಬ ಗ್ರಂಥದಿಂದ, ಇದುವರೆಗೂ ಪ್ರಕಾಶಕ್ಕೆ ಬಾರದಿರುವ ಮಹಾದೇವಿಯಕ್ಕನ ವಚನಗಳ ಸಂಗ್ರಹಗಳು ಆ ಪುಸ್ತಕಭಂಡಾರದಲ್ಲಿ ಇರುವಂತೆ ಗೊತ್ತಾಗುತ್ತದೆ. ಇವುಗಳ ಉಪಯೋಗವನ್ನು ವಚನ ಸಂಪಾದಕರು ಅವಶ್ಯವಾಗಿ ಪಡೆಯಬೇಕು.

---

## ಇತ್ತೀಚಿನ ವರ್ಷಗಳ ಪ್ರಕಟನೆಗಳು

| | ರೂ.ಪೈ. |
|---|---|
| ಕಲೆಗಳು ಮತ್ತು ಮಾನವ—ಇರ್ವಿನ್ ಎಡ್ಮನ್ | ೨.೨೫ |
| ಮಹಾತ್ಮರ ಬರವಿಗಾಗಿ—ಆರ್. ಕೆ. ನಾರಾಯಣ್ | ೪.೦೦ |
| ಅಮೆರಿಕದಲ್ಲಿ ನಾನು—ಬಿ. ಜಿ. ಎಲ್. ಸ್ವಾಮಿ | ೩-೨೫ |
| ಚಿತ್ರಭಾನು ಅಥವಾ ೧೯೪೨—ಗೋವಿಂದಪೈ | ೩.೦೦ |
| ಸಂಪಿಗೆ ಅರಳೀವೆ—ಮಹಾದೇವ ನಾಯಕ | ೧.೭೫ |
| ಜೀವನ ಸೌಂದರ್ಯ ಮತ್ತು ಸಾಹಿತ್ಯ—ಡಿ. ವಿ. ಜಿ. | ೪.೦೦ |
| ಜಾನಪದ ರಸಗಂಗೆ—ಮಹಾದೇವ ನಾಯಕ್ | ೨.೨೫ |
| ಮಿಥುನಲಗ್ನ—ವಿಮಲ ಮಿತ್ರ | ೩.೦೦ |
| ಗೊಲ್ಗೊಥಾ, ವೈಶಾಖಿ—ಗೋವಿಂದಪೈ | ೨.೨೫ |
| ಹೆಬ್ಬೆರಳು—ಗೋವಿಂದಪೈ | ೧.೨೫ |
| ಹಳ್ಳಿಯಸಮಾಜ—ಶರಚ್ಚಂದ್ರ | ೨.೫೦ |
| ರಾಮಗಢದ ರಾಣಿ—ವೃಂದಾವನಲಾಲ್ ವರ್ಮ | ೨.೨೫ |
| ಗದಾಯುದ್ಧ ಸಂಗ್ರಹಂ—ತೀ.ನಂ. ಶ್ರೀಕಂಠಯ್ಯ | ೫.೦೦ |
| ರಾಕ್ಷಸನ ಮುದ್ರಿಕೆ—ತೀ. ನಂ. ಶ್ರೀಕಂಠಯ್ಯ | ೨.೫೦ |
| ನಂಬಿಯಣ್ಣನರಗಳೆ—ತೀ. ನಂ. ಶ್ರೀಕಂಠಯ್ಯ | ೩.೫೦ |
| ಹುಟ್ಟೂರಿನ ಮೋಹ—ಎ. ಎಸ್. ರಾಮಕೃಷ್ಣ | ೨.೦೦ |
| ರಂಗಬಿನ್ನಪ—ಎಸ್. ವಿ. ರಂಗಣ್ಣ | ೧೫.೦೦ |
| ರವೀಂದ್ರ ಕಥಾಮಂಜರಿ—ರವೀಂದ್ರನಾಥ ಠಾಕೂರ್ | ೮.೦೦ |
| ಗಂಟೆಗೋಪುರ—ಹೊಯಿಸಳ | ೦.೫೦ |
| ಹಳ್ಳಿಯ ಬಾಳು—ಗೊರೂರು ರಾಮಸ್ವಾಮಿ ಐಯ್ಯಂಗಾರ್ | ೨.೭೫ |
| ನೀತಿ ಚಿಂತಾಮಣಿ (೧೫ ಭಾಗಗಳು)—ಎಂ. ಎಸ್. ಪುಟ್ಟಣ್ಣ | ೭.೫೦ |
| ಕೆಂಪು ಮೀನು—ತಗಝಿ ಶಂಕರಪಿಳ್ಳೆ | ೬.೦೦ |

ಕಾವ್ಯಾಲಯ :: ಪ್ರಕಾಶಕರು :: ಮೈಸೂರು-೪

ಆರ್ಯಕೀರ್ತಿ—ಜ ವಾಸುದೇವಯ್ಯ ೨.೫೦

ಎವರೆಸ್ಟ್ ವೀರ—ತೆನ್‌ಸಿಂಗ್, ಅಲ್ಮನ್ ೫.೩೦

ಮಹಾರಾಷ್ಟ್ರ ಜೀವನ ಪ್ರಭಾತ—ರಮೇಶಚಂದ್ರದತ್ತ ೧.೨೫

ರಜಪೂತ ಜೀವನ ಸಂಧ್ಯಾ—ರಮೇಶಚಂದ್ರದತ್ತ ೧.೭೫

ಶ್ರೀ ಶಂಕರಾಚಾರ್ಯರು—ಬಲದೇವ ಉಪಾಧ್ಯಾಯ ೮.೦೦

ಆನಂದ ಮಠ—ಬಂಕಿಂಚಂದ್ರ ೩.೦೦

ಮಹಾಯಾತ್ರಿಕ—ವಿಭೂತಿ ಭೂಷಣ ೫.೫೦

ಸಂಯುಕ್ತ ಸಂಸ್ಥಾನಗಳ ಸಾಹಿತ್ಯ—ಅನು: ಎಸ್. ಮೂರ್ತಿರಾವ್ ೬.೫೦

ವಾಗ್ಗೇಯಕರ ವಾಸುದೇವಾಚಾರ್ಯ ಪ್ರಪಂಚದ ಬಾಲ್ಯದಲ್ಲಿ—
ವೆರಿಯರ್ ಎಲ್ವಿನ್ ೪.೦೦

ಸರಿದ ಬೆರಳು—ಹೆಚ್. ವಿ. ಸಾವಿತ್ರಮ್ಮ ೩.೦೦

ನನ್ನ ಬಾಲ್ಯದ ದಿನಗಳು—ರವೀಂದ್ರನಾಥ ಠಾಕೂರ್ ೧.೫೦

ರೈಟ್ ಸಹೋದರರು—ರೇನಾಲ್ಡ್ಸ್ ೧.೭೫

ಸಂಯುಕ್ತ ಸಂಸ್ಥಾನಗಳು—ಭೂಗೋಳ ಮತ್ತು ಬೆಳವಣಿಗೆ ೨.೨೫

ಕನ್ನಡ ಹಿತೋಪದೇಶ—ಕ. ನರಸಿಂಹಶಾಸ್ತ್ರಿ ೫.೦

ಕನ್ನಡ ಪಂಚತಂತ್ರ—ಕ. ನರಸಿಂಹಶಾಸ್ತ್ರಿ ೭.೫

ಮುದ್ರಾರಾಕ್ಷಸ ನಾಟಕ ಕಥೆ—ಮಹಾದೇವ ೦.೭

ನರ್ತಕಿಯ ಪೂಜೆ—ರವೀಂದ್ರನಾಥ ಠಾಕೂರ್ ೨.೦

ಅಮೆರಿಕಾ ಜನತೆಯ ಆರ್ಥಿಕ ನಿರ್ವಹಣೆ ೬.೫

ಚಂದುಮಾಮ—ಹೊಯಿಸಳ ೦.೫

ಗೀತಾ ತಾತ್ಪರ್ಯ—ಡಿ.ವಿ.ಜಿ. ೧೮.೦

ಶ್ರೀರಾಮ ಪರೀಕ್ಷಣಂ—ಡಿ.ವಿ.ಜಿ ೩.

ಚಿನ್ನದ ದೋಣಿ—ರವೀಂದ್ರನಾಥ ಠಾಕೂರ್ ೨.

ಕಂಬದ ಹುಚ್ಚು—ಜನಾರ್ದನ ಗುರ್ಕಾರ್ ೨.

ವಳ್ಳತ್ತೋಳ್ ಕವಿತೆಗಳು— ೪.

---




:: ಮೈಸೂರು-೪



## ಇತ್ತೀಚಿನ ಪ್ರಕಟನೆಗಳು

ರಾಜಕುಮಾರಿಯ ಸೋಲು—ಗ್ರಿಮ್ ಸೋದರರು ೦
ದಾದಾಭಾಯಿ ನವರೋಜಿ—ಮುಸಾನಿ ೩.
ಭೀಷ್ಮ ಚರಿತೆ—ಚ. ವಾಸುದೇವಯ್ಯ ೩.
ಶ್ರೀರಾಮಾಶ್ವಮೇಧಂ—ಮುದ್ದಣ ೪
ಸಾಹಿತ್ಯ ಶಕ್ತಿ—ಡಿ. ವಿ. ಜಿ. ೪
ಸುಖಸಾಧನೆ—ಬರ್ಟ್ರೆಂಡ್ ರಸೆಲ್ ೩.
ರಾಜ-ರಾಣಿ—ರವೀಂದ್ರನಾಥ ಠಾಕೂರ್ ೩.
ಬಲಿದಾನ—ರವೀಂದ್ರನಾಥ ಠಾಕೂರ್ ೧.
ರಕ್ತಕರವೀರ—ರವೀಂದ್ರನಾಥ ಠಾಕೂರ್ ೨.
ಸಾಹೆಬ್, ಬೀಬಿ ಮತ್ತು ಗುಲಾಮ್—ವಿಮಲ ಮಿತ್ರ ೧೨.
ಏಳು ಇಪ್ಪಾರಿನ ಮನೆ—ನ್ಯಥಾನಿಯಲ್ ಹಾಥಾರ್ನ್ ೭.
ಕಾವೇರಿಯ ಆರ್ತರವ—ಪಂಕಜ ೫.
ಸಂಸಾರ—ರಮೇಶಚಂದ್ರ ದತ್ತ ೨.
ಸಮಾಜ—ರಮೇಶಚಂದ್ರ ದತ್ತ ೨.
ರಜನೀ—ಬಂಕಿಂಚಂದ್ರ ೨.
ಮರು ಮದುವೆ—ಎಚ್. ವಿ. ಸಾವಿತ್ರಮ್ಮ ೫.
ನೌಕಾಘಾತ—ರವೀಂದ್ರನಾಥ ಠಾಕೂರ್ ೩.
ಅನ್ತಃಪುರಗೀತೆ—ಡಿ. ವಿ. ಜಿ. ೮.
ಮಾಡಿದ್ದುಣ್ಣೋ ಮಹಾರಾಯ—ಎಂ. ಎಸ್. ಪುಟ್ಟಣ್ಣ ೩
ಬಾಳಿಗೊಂದು ನಂಬಿಕೆ—ಡಿ. ವಿ. ಜಿ. ೩
ಕಾವ್ಯಸಮೀಕ್ಷೆ—ತೀ. ನಂ. ಶ್ರೀಕಂಠಯ್ಯ ೩

ಕ್ಯಾಲಿಕೊ ಪ್ರತಿ ೫

ಕಾವ್ಯಾಲಯ :: ಪ್ರಕಾಶಕರು :: ಮೈಸೂರು-೪